ನವಸಾಕ್ಷರ ಪುಸ್ತಕ ಮಾಲೆ ೨೮

# ಇಂದಿರಾಗಾಂಧಿ

ಭಾಗೀರಥಿ ಹೆಗಡೆ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹಾ. ಮಾ. ನಾಯಕ
ಎಚ್. ನರಸಿಂಹಯ್ಯ
ಜಿ. ನಾರಾಯಣ
ಎಲ್. ಎಸ್. ಶೇಷಗಿರಿರಾವ್
ಶಾಂತರಸ
ಕೆ. ವಿ. ಸುಬ್ಬಣ್ಣ
ಗೊ. ರು. ಚನ್ನಬಸಪ್ಪ
ಪಿ. ಎಸ್. ಶಂಕರ್
ಶಿವಶಂಕರ ಹಿರೇಮಠ
ಆರ್. ಎಸ್. ರಾಜಾರಾಮ್
ಶ್ರೀಮತಿ ಎಲ್. ಜಿ. ಸುಮಿತ್ರ

**ಸಂಪಾದಕ ಸಮಿತಿ**

*ಶ್ರೀಯುತರಾದ*
ಎಸ್. ಜಿ. ನಾಗಲೋಟಿಮಠ
ಕೆ. ವಿ. ನಾರಾಯಣ
ಪುರುಷೋತ್ತಮ ಬಿಳಿಮಲೆ
ಕರೀಗೌಡ ಬೀಚನಹಳ್ಳಿ
ಅಮೃತ ಸೋಮೇಶ್ವರ
ಸಿ. ಆರ್. ಚಂದ್ರಶೇಖರ್
ಬಿ. ಎ. ಶ್ರೀಧರ
ಲಿಂಗದೇವರು ಹಳೆಮನೆ
ಭ. ಮಲ್ಲಿಕಾರ್ಜುನ
ಮಹಾಬಲೇಶ್ವರರಾವ್
ಭಕ್ತಪ್ರಿಯ
ಎಂ. ಪಿ. ಪರಮಶೇಖರಯ್ಯ
ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ – ೭೮

# ಇಂದಿರಾಗಾಂಧಿ

ಭಾಗೀರಥಿ ಹೆಗಡೆ







ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ–೫೮೩ ೨೧೧

INDIRA GANDHI : By Bhagirathi Hegade. Published by The Director of Prasaranga, Kannada University, Hampi - 583 211, KARNATAKA.
First Impression 1994, Pp.ii + 26, Rs. 8.00.

---





ಸಂಯೋಜನಾಧಿಕಾರಿ
ಡಾ.ಎಚ್.ಎಸ್.ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

ಪ್ರಕಾಶಕರು
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ — ೫೮೩ ೨೧೧

ಮುಖಪುಟ ವಿನ್ಯಾಸ
ಕೆ.ಮಕಾಳಿ

ಬೆಲೆ : ರೂ. ೮.೦೦

ಮುದ್ರಕರು
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
8/1, ಮಾರೇನಹಳ್ಳಿ, 1ನೇ ಕ್ರಾಸ್, 23ನೇ ಮೇನ್,
ಜೆ. ಪಿ. ನಗರ, ಬೆಂಗಳೂರು-560 078.
ಫೋನ್: 642102




# ಇಂದಿರಾಗಾಂಧಿ

"ರಾಜ್ಯ ಆಳೋ ತಂದೆಗಿಂತ ರಾಗಿ ಬೀಸೋ ತಾಯಿ ಲೇಸು" ಅನ್ನುವುದು ಹಳ್ಳಿಗಾಡಿನ ಒಂದು ಗಾದೆ. ಹಿಂದಿನಿಂದ ಇಂದಿನವರೆಗೆ ಅರಸುತನದೊಂದಿಗೇ ಗರತಿತನವನ್ನು ಮೆರೆದ ತಾಯಂದಿರು ನಮ್ಮಲ್ಲಿ ಬೇಕಾದಷ್ಟು ಇದ್ದಾರೆ. ರಜಿಯಾ ಸುಲ್ತಾನಾ, ಚಾಂದಬೀಬಿ, ಬೆಳವಡಿ ಮಲ್ಲಮ್ಮ, ಕಿತ್ತೂರ ಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮೀಬಾಯಿ ಇತ್ಯಾದಿ ವೀರ ಮಹಿಳೆಯರು ಆಗಿಹೋಗಿದ್ದಾರೆ. ಆದರೆ ಶ್ರೀಮತಿ ಇಂದಿರಾಗಾಂಧಿಯವರು ಇವರೆಲ್ಲರಿಗಿಂತ ಬೇರೆಯಾಗಿ ನಿಲ್ಲುತ್ತಾರೆ. ಮಹಿಳಾ ರಾಜಕಾರಣಿಗಳ ಸಾಲಿನಲ್ಲಿ ಅವರ ಸ್ಥಾನ ಮಹತ್ವದ್ದಾಗಿದೆ.

ಈ ಹಿಂದೆ ಹೇಳಿದ ರಾಣಿಯರು ಹಕ್ಕಿನಿಂದ ಬಂದ ರಾಜ್ಯವನ್ನು ಆಳಿದವರು. ಅರಸೊತ್ತಿಗೆಯ ಸರ್ವಾಧಿಕಾರದಿಂದ ಬಂದು ಆಡಳಿತ ನಡೆಸಿದವರು. ಜೊತೆಗೆ ಅವರೆಲ್ಲರ ಕ್ಷೇತ್ರ ಇಷ್ಟೊಂದು ವಿಸ್ತಾರವಾಗಿರಲಿಲ್ಲ. ಅವೆಲ್ಲವೂ ಸರಿ-ಸುಮಾರು ಸಣ್ಣ ಸಣ್ಣ ಸಂಸ್ಥಾನಗಳಾಗಿದ್ದವು. ಹಾಗಾಗಿ ಅವರ ರಾಜ್ಯಭಾರದ ಮೇರೆ ಸೀಮಿತವಾಗಿತ್ತು. ಜವಾಬ್ದಾರಿ ಕಡಿಮೆಯಿತ್ತು. ಅಲ್ಲದೆ "ರಾಜನೇ ದೇವರು" ಎಂಬ ನಂಬಿಕೆ ಆಗಿನ ಜನರಲ್ಲಿ ಬಲವಾಗಿ ಬೇರೂರಿತ್ತು. ಹಾಗಾಗಿ ಆಡಳಿತ ಕೊಂಚ ಸುಲಭವಾಗಿತ್ತು.

ಆದರೆ ಇಂದಿರಾಗಾಂಧಿಯವರು ಆಧುನಿಕ ಕಾಲದಲ್ಲಿದ್ದರು. ಅವರು ಜನ ಸಾಮಾನ್ಯರಿಂದ ಚುನಾಯಿತರಾಗಿದ್ದರು. ಜೊತೆಗೆ ಜಗತ್ತಿನ ಅತಿದೊಡ್ಡ ಪ್ರಜಾಪ್ರಭುತ್ವದ

ನಾಯಕಿಯಾಗಿದ್ದರು. ಇಷ್ಟೊಂದು ವಿಶಾಲ ಭೂಪ್ರದೇಶದ ಹೊಣೆಗಾರಿಕೆ ಅವರ ಮೇಲಿತ್ತು. ಅಲ್ಲದೆ ಇಲ್ಲಿ ನೂರಾರು ಜಾತಿ ಪಂಥಗಳು, ಹಲವಾರು ಭಾಷೆಗಳು. ಈ ಬಗೆಯ ಜನರನ್ನೆಲ್ಲ ನಿಭಾಯಿಸಿಕೊಂಡು ಹೋಗುವ ಬಹುದೊಡ್ಡ ಸವಾಲು ಅವರ ಎದುರಿಗಿತ್ತು.

ಈ ಸವಾಲನ್ನು ಅವರು ಎದುರಿಸಿದ ಬಗೆ ಹೇಗೆ? ನಮ್ಮ ಜನತಂತ್ರಕ್ಕೆ ಅವರಿಂದ ದೊರೆತ ಕಾಣಿಕೆ ಯಾವುದು? ನಮ್ಮ ದೇಶದ ಇತಿಹಾಸದಲ್ಲಿ ಒಬ್ಬ ಮಹಿಳಾ ಪ್ರಧಾನಿಯಾಗಿ ಅವರ ಸ್ಥಾನ ಯಾವುದು? ಇತ್ಯಾದಿ ಪ್ರಶ್ನೆಗಳು ಈ ಸಂದರ್ಭದಲ್ಲಿ ಮೇಲೇಳುತ್ತವೆ. ಆದರೆ ಉತ್ತರ ಅಷ್ಟು ಸುಲಭವಿಲ್ಲ. ಯಾವುದಕ್ಕೂ ಅಂಜದ ಅವರ ವ್ಯಕ್ತಿತ್ವವನ್ನು, ದಿಟ್ಟ ನಿರ್ಧಾರಗಳನ್ನು ಹೊಗಳುವವರೂ ಇದ್ದಾರೆ. ತೆಗಳುವವರೂ ಇದ್ದಾರೆ. ಅವರು ಜನಸಾಮಾನ್ಯರ "ಅಮ್ಮ" ಆಗಿದ್ದರು. ಟೀಕಾಕಾರರಿಗೆ "ಸರ್ವಾಧಿಕಾರಿಯೂ" ಆಗಿದ್ದರು.

## ಬಾಲ್ಯ ವಿದ್ಯಾಭ್ಯಾಸ

ಇಂದಿರಾ ಪ್ರಿಯದರ್ಶಿನಿ ಸಾವಿರದ ಒಂಬೈನೂರಾ ಹದಿನೇಳರ ನವೆಂಬರ್ ಹತ್ತೊಂಬತ್ತರಂದು ಅಲಹಾಬಾದಿನಲ್ಲಿ ಹುಟ್ಟಿದರು. ತಂದೆ ಜವಾಹರಲಾಲ ನೆಹರು, ತಾಯಿ ಕಮಲಾದೇವಿ. ಅಜ್ಜ ಪಂಡಿತ ಮೋತಿಲಾಲ ನೆಹರು, ಅಜ್ಜಿ ಸ್ವರೂಪರಾಣಿ.

ಇಂದಿರಾ ಹುಟ್ಟಿದಾಗ ಅಜ್ಜಿ ಮೊಮ್ಮಗನನ್ನು ನಿರೀಕ್ಷಿಸುತ್ತಿದ್ದರು. ಅವರಿಗೆ ತುಂಬಾ ನಿರಾಸೆಯಾಯಿತಂತೆ. ಆಗ ಮೋತಿಲಾಲರು "ಆದರೇನಾಯಿತು ಬಿಡು... ಅದೃಷ್ಟವಿದ್ದರೆ ಈ ಹುಡುಗಿಯೇ ಒಂದು ದಿನ ಗಂಡಿಗಿಂತ ಕೀರ್ತಿವಂತಳಾಗಿ ಬದುಕುತ್ತಾಳೆ" ಎಂದರಂತೆ.

ನೆಹರು ಅವರ ಆನಂದಭವನದಲ್ಲಿ ಮನೆ ತುಂಬ ಆಳುಕಾಳುಗಳು, ವಿದೇಶೀ ವಸ್ತುಗಳ ಭಂಡಾರ, ಅತ್ಯಮೂಲ್ಯ ಆಟಿಗೆಗಳ ರಾಶಿ, ತಾಯಿ, ತಂದೆ, ಅಜ್ಜ, ಅಜ್ಜಿಯರ

ಮಮತೆಯ ಮಡಿಲು. ಬಾಲಕಿ ಇಂದಿರಾಳ ಬಾಲ್ಯ ಸುಖ ಸಮೃದ್ಧಿಯಿಂದ ಕಳೆಯುವ ಎಲ್ಲಾ ಅವಕಾಶಗಳಿದ್ದವು. ಆದರೆ ಹಾಗಾಗಲಿಲ್ಲ. ಅವಳು ಮೂರನೇ ವಯಸ್ಸಿಗೆ ಅಂಬೆಗಾಲಿಡುವ ಹೊತ್ತಿಗೆ ದೇಶದ ಸ್ವಾತಂತ್ರ್ಯ ಚಳವಳಿ ಪ್ರಾರಂಭವಾಗಿತ್ತು. ಶ್ರೀ ಮೋಹನದಾಸ ಕರಮಚಂದ ಗಾಂಧಿಯವರ ನೇತೃತ್ವದಲ್ಲಿ ಅಸಹಕಾರ ಆಂದೋಲನ ಭುಗಿಲೆದ್ದಿತ್ತು. ತಂದೆ, ಅಜ್ಜ ಇಬ್ಬರೂ ಸತ್ಯಾಗ್ರಹದಲ್ಲಿ ಭಾಗವಹಿಸಿ ಪದೇ ಪದೇ ಜೈಲು ಸೇರುತ್ತಿದ್ದರು. ತಾಯಿ ಕಮಲಾದೇವಿ ಅನಾರೋಗ್ಯದಿಂದ ಆಸ್ಪತ್ರೆಯಲ್ಲಿರುತ್ತಿದ್ದರು. ಹಾಗಾಗಿ ಇಂದಿರಾ ಹಿರಿಯರ ವಾತ್ಸಲ್ಯದಿಂದ ವಂಚಿತಳಾದಳು. ಅವಳ ವಿದ್ಯಾಭ್ಯಾಸದತ್ತ ನಿಗಾ ವಹಿಸುವವರು ಕೂಡಾ ಯಾರೂ ಇದ್ದಿಲ್ಲ. ಸಾವಿರದ ಒಂಬೈನೂರಾ ಇಪ್ಪತ್ತಮೂರರಲ್ಲಿ ಅಲಹಾಬಾದಿನ ಸೇಂಟ್ ಸಿಸಿಲಾ ಸ್ಕೂಲಿಗೆ ಸೇರಿದಳು.

ಸಾವಿರದ ಒಂಬೈನೂರಾ ಇಪ್ಪತ್ತಾರರಲ್ಲಿ ತಾಯಿಯ ಚಿಕಿತ್ಸೆಗಾಗಿ ತಂದೆಯೊಂದಿಗೆ ಇಂದಿರಾ ಸ್ವಿಜರ್‌ಲ್ಯಾಂಡಿಗೆ ಹೋದಳು. ಅಲ್ಲಿ ಎರಡು, ಮೂರು ಶಾಲೆಗಳಿಗೆ ಹೋಗಬೇಕಾಯಿತು. ಆದರೆ ತಾಯಿಯೊಂದಿಗೆ ಸ್ವದೇಶಕ್ಕೆ ವಾಪಸ್ಸಾದ್ದರಿಂದ ಇಲ್ಲಿ ಬಂದ ಮೇಲೆ ಅಲಹಾಬಾದಿನ ಸೇಂಟ್ ಮೇರೀಸ್ ಕಾನ್ವೆಂಟಿಗೆ ಸೇರಿದಳು. ಆದರೆ ಅವಳ ಶಿಕ್ಷಣ ಶಾಲೆಯ ನಾಲ್ಕು ಗೋಡೆಗಳನ್ನು ಮೀರಿ ಎಷ್ಟೋ ಮುಂದುವರೆದಿತ್ತು. ಮನೆಗೆ ದೇಶದ ಪ್ರಮುಖ ನಾಯಕರೆಲ್ಲ ಬಂದು ಹೋಗುತ್ತಿದ್ದರು. ದೇಶದ ಸ್ವಾತಂತ್ರ್ಯದ ಕುರಿತು ರಾಷ್ಟ್ರೀಯ ಆಂದೋಲನದ ಕುರಿತು ಚರ್ಚಿಸುತ್ತಿದ್ದರು. ಹಾಗಾಗಿ ಅವಳಲ್ಲಿ ದೇಶಾಭಿಮಾನ, ರಾಷ್ಟ್ರಭಕ್ತಿ, ಸ್ವಾತಂತ್ರ್ಯದ ಹಂಬಲಗಳು ತಾನೇ ತಾನಾಗಿ ಮೈದಳೆದಿದ್ದವು. ತಂದೆತಾಯಿಯರ ಜೊತೆ ಯುರೋಪನ್ನೆಲ್ಲ ಸಂಚರಿಸಿದ್ದರಿಂದ ಜಗತ್ತಿನ ಅದೆಷ್ಟೋ ವಿಸ್ಮಯಗಳು ಅವಳಲ್ಲಿ ಬೆರಗು ಹುಟ್ಟಿಸುತ್ತಿದ್ದವು. ಮನೆಯಲ್ಲಿದ್ದ ಅಮೂಲ್ಯ ಪುಸ್ತಕ ಭಂಡಾರದಿಂದ ಅವಳು ತನಗೆ ಬೇಕಾದ ಪುಸ್ತಕವನ್ನೆತ್ತಿ ಓದುತ್ತಿದ್ದಳು. ಆ ಸಣ್ಣ ವಯಸ್ಸಿಗೇ ಅವಳು ಪ್ರಸಿದ್ಧ ಇಂಗ್ಲಿಷ್ ನಾಟಕಗಳನ್ನೆಲ್ಲ ಓದಿ ಮುಗಿಸಿದ್ದಳು. ಅಲ್ಲದೆ ತಂದೆ ಜವಾಹರರು ಸಮಯ ಸಿಕ್ಕಾಗಲೆಲ್ಲ ಪ್ರತಿಯೊಂದು ವಿಷಯದ ಬಗ್ಗೆಯೂ

ವಿವರಣೆ ನೀಡುತ್ತಿದ್ದರು. ಸಾವಿರದ ಒಂಬೈನೂರಾ ಇಪ್ಪತ್ತೆಂಟರಿಂದ ಜವಾಹರಲಾಲರು ಸೆರೆಮನೆಯಿಂದ ಬರೆಯುತ್ತಿದ್ದ ಪತ್ರಗಳು "ತಂದೆಯಿಂದ ಮಗಳಿಗೆ ಪತ್ರಗಳು" ಎಂಬ ಪುಸ್ತಕವಾಗಿ ಪ್ರಸಿದ್ಧವಾಗಿವೆ. ಅವುಗಳಲ್ಲಿ ಅವರು ಇತಿಹಾಸ ಪೂರ್ವದ ಮನುಷ್ಯನ ಚರಿತ್ರೆಯನ್ನು ಹೇಳಿದ್ದಾರೆ. ಜಗತ್ತಿನ ಇತಿಹಾಸವನ್ನು ವಿವರಿಸಿದ್ದಾರೆ. ಭಾರತದ ಚರಿತ್ರೆಯನ್ನು ಹೃದಯಂಗಮವಾಗಿ ಬಣ್ಣಿಸಿದ್ದಾರೆ. ಹೀಗಾಗಿ ಬಾಲಕಿ ಇಂದಿರಾಳಲ್ಲಿ ಒಂದು ಜಾಗತಿಕ ವ್ಯಕ್ತಿತ್ವ ಆಗಲೇ ಮೊಳಕೆಯೊಡೆಯುತ್ತಿತ್ತು.



**ಮಹಾತ್ಮಾ ಗಾಂಧಿಯವರ ಜೊತೆ ಬಾಲಕಿ ಇಂದಿರಾ**

ಮಹಾತ್ಮಾಗಾಂಧಿಯವರು ಅಲಹಾಬಾದಿಗೆ ಬಂದಾಗಲೆಲ್ಲ ಆನಂದಭವನದಲ್ಲೇ ತಂಗುತ್ತಿದ್ದರು. ಅವರಿಗೆ ಬಾಲಕಿ 'ಇಂದು'ವನ್ನು ಕಂಡರೆ ಅಧಿಕ ಮಮತೆ. 'ಇಂದು' ಕೂಡ ಗಾಂಧೀ ವಿಚಾರಧಾರೆಯಿಂದ ತುಂಬಾ ಆಕರ್ಷಿತಳಾಗಿದ್ದಳು. ಸಾವಿರದ ಒಂಬೈನೂರಾ ಇಪ್ಪತ್ತೆಂಟರಲ್ಲಿ ಗಾಂಧೀಜಿಯವರು ಆರಂಭಿಸಿದ ಬಾಲ ಚರಖಾ ಸಂಘದಲ್ಲಿ ಇಂದಿರಾ

ಪ್ರಮುಖ ವ್ಯಕ್ತಿಯಾಗಿದ್ದಳು. ಉಳಿದೆಲ್ಲ ಮಕ್ಕಳು ಕುಂಟೋಬಿಲ್ಲೆ ಆಡುತ್ತಿದ್ದಾಗ ಅವಳು ಸತ್ಯಾಗ್ರಹದ ಆಟ ಆಡುತ್ತಿದ್ದಳು. ಒಂದು ಸಾಲಿನಲ್ಲಿ ಸತ್ಯಾಗ್ರಹಿಗಳ ಗೊಂಬೆಗಳನ್ನು ನಿಲ್ಲಿಸುತ್ತಿದ್ದಳು. ಎದುರು ದಿಕ್ಕಿನಲ್ಲಿ ಅಶ್ವಾರೋಹಿ ಸೈನಿಕರ ಗೊಂಬೆಗಳಿರುತ್ತಿದ್ದವು. "ಭಾರತ ಮಾತಾಕಿ ಜೈ, ಮಹಾತ್ಮಾಗಾಂಧೀ ಕಿ ಜೈ" ಎನ್ನುತ್ತಾ ಸತ್ಯಾಗ್ರಹಿಗಳನ್ನು ಮುಂದೆ ನಡೆಸುತ್ತಿದ್ದಳು.

ಸಾವಿರದ ಒಂಬೈನೂರಾ ಮೂವತ್ತರಲ್ಲಿ ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಗಾಂಧಿ ಮತ್ತು ಇತರ ಮುಂದಾಳುಗಳನ್ನೆಲ್ಲ ಬ್ರಿಟಿಷ್ ಸರಕಾರ ಸೆರೆಮನೆಗೆ ತಳ್ಳಿತು. ಮೋತಿಲಾಲ-ಜವಾಹರಲಾಲರೂ ಬಂಧಿತರಾದರು. ಹದಿಮೂರರ ಹುಡುಗಿ ತಾನೂ ಸತ್ಯಾಗ್ರಹಕ್ಕೆ ಸೇರುತ್ತೇನೆಂದಾಗ ಕಾಂಗ್ರೆಸ್‌ನವರು ಮಕ್ಕಳನ್ನು ಸೇರಿಸಿಕೊಳ್ಳುವುದಿಲ್ಲವೆಂದರು. ಆಗ ಇಂದಿರಾ ತನ್ನದೇ ಆದ ಮಕ್ಕಳ ಗುಂಪೊಂದನ್ನು ಕಟ್ಟಿದರು. ಅದಕ್ಕೆ "ವಾನರಸೇನೆ' ಎಂದು ಹೆಸರಿಟ್ಟರು. ಶ್ರೀರಾಮನಿಗೆ ವಾನರರು ಯುದ್ಧದಲ್ಲಿ ಸಹಾಯ ಮಾಡಿದಂತೆ ಇವರ ವಾನರಸೇನೆ ಸ್ವಾತಂತ್ರ್ಯ ಯೋಧರಿಗೆ ತುಂಬಾ ಸಹಾಯ ಮಾಡಿತು.

ಸಾವಿರದ ಒಂಬೈನೂರಾ ಮೂವತ್ತೊಂದರ ಫೆಬ್ರವರಿ ಎರಡರಂದು ಅಜ್ಜ ಮೋತಿಲಾಲರು ಅನಾರೋಗ್ಯದಿಂದ ಮರಣ ಹೊಂದಿದರು. ಅವರ ಮಾತು ಮತ್ತು ನಗೆಗಳಿಂದ ತುಂಬಿರುತ್ತಿದ್ದ ಆನಂದಭವನ ಖಾಲಿ ಖಾಲಿಯಾಯಿತು. ಇಂದಿರಾ ತೀರಾ ದುಃಖಿತಳಾದಳು.

ಅದೇ ವರ್ಷ ಮೇ ತಿಂಗಳಲ್ಲಿ ಇಂದಿರಾಳನ್ನು ಜವಾಹರರು ಪುಣೆಯ ಪ್ಯುಪಿಲ್ಸ್ ಓನ್ ಶಾಲೆಗೆ ಸೇರಿಸಿದರು. ಅದು ವಸತಿ ಶಾಲೆಯಾಗಿತ್ತು. ಅಲ್ಲಿಯೇ ಮೂರು ವರ್ಷ ಅಭ್ಯಾಸ ಮಾಡಿ ಇಂದಿರಾ ಮ್ಯಾಟ್ರಿಕ್ ಪರೀಕ್ಷೆ ಪಾಸಾದರು. ಮುಂದಿನ ಶಿಕ್ಷಣಕ್ಕಾಗಿ ಆಕೆ ಶಾಂತಿನಿಕೇತನಕ್ಕೆ ಹೋದರು.

ಶಾಂತಿನಿಕೇತನವನ್ನು ಕವಿ ರವೀಂದ್ರನಾಥ ಟಾಗೋರರು ನಡೆಸುತ್ತಿದ್ದರು. ಅಲ್ಲಿ ಗುರುಕುಲ ಪದ್ಧತಿಯಿತ್ತು. ಆಶ್ರಮವಾಸಿಗಳ ಸರಳ ಬದುಕಿತ್ತು. ಎಲ್ಲರಿಗೂ ದಿನನಿತ್ಯದ ದುಡಿಮೆಯಿತ್ತು. ಇಂದಿರಾ ಎಲ್ಲ ಸಂಗತಿಗಳಿಗೂ ಹೊಂದಿಕೊಂಡರು. ಅಷ್ಟರಲ್ಲಿ ತಾಯಿಯ ಆರೋಗ್ಯ ವಿಷಮಿಸಿತು. ಸಾವಿರದ ಒಂಬೈನೂರಾ ಮೂವತ್ತೈದು, ಏಪ್ರಿಲ್ ಹದಿಮೂರರಂದು ಅವರು ತಾಯಿಯೊಂದಿಗೆ ಜರ್ಮನಿಗೆ ಹೋದರು. ಹಾಗಾಗಿ ಶಾಂತಿನಿಕೇತನದ ವಿದ್ಯಾಭ್ಯಾಸಕ್ಕೂ ಕತ್ತರಿ ಬಿತ್ತು. ದಿನದಿಂದ ದಿನಕ್ಕೆ ಕಮಲಾರ ಆರೋಗ್ಯ ಕೆಡುತ್ತಲೇ ಹೋಯಿತು. ಅವರು ಸಾವಿರದ ಒಂಬೈನೂರಾ ಮೂವತ್ತಾರು ಫೆಬ್ರವರಿ ಇಪ್ಪತ್ತೆಂಟರಂದು ಲೋಸೆನ್‌ನಲ್ಲಿ ನಿಧನರಾದರು. ಐದೇ ವರ್ಷಗಳ ಅಂತರದಲ್ಲಿ ಯುವತಿ ಇಂದಿರಾ ಮಮತೆಯ ಅಜ್ಜನನ್ನು ಪ್ರೀತಿಯ ತಾಯಿಯನ್ನೂ ಕಳೆದುಕೊಳ್ಳಬೇಕಾಯಿತು.

ಅದೇ ವರ್ಷ ಇಂದಿರಾ ಯಾವತ್ತಿನಿಂದಲೂ ಕನವರಿಸುತ್ತಿದ್ದ ರಾಷ್ಟ್ರೀಯ ಕಾಂಗ್ರೆಸ್ಸಿನ ಸದಸ್ಯತ್ವ ಪಡೆದುಕೊಂಡರು. ತಾಯಿಯ ಮರಣಾನಂತರ ಅವರು ಇಂಗ್ಲೆಂಡಿನಲ್ಲಿ ಪ್ರವೇಶ ಪರೀಕ್ಷೆ ಪಾಸು ಮಾಡಿದರು.

ಹೀಗೆ ಅಭ್ಯಾಸಕ್ಕೆಂದು ಇಂದಿರಾ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಸೇರಿದರು. ಅಲ್ಲಿಗೆ ಜಗತ್ತಿನ ಎಲ್ಲಾ ದೇಶಗಳ ವಿದ್ಯಾರ್ಥಿಗಳು ಓದಲು ಬರುತ್ತಿದ್ದರು. ಅವರಲ್ಲಿ ಅಲಹಾಬಾದಿನ ಫಿರೋಜಗಾಂಧಿ ಎಂಬ ತರುಣರೂ ಒಬ್ಬರಾಗಿದ್ದರು. ಕಮಲಾದೇವಿಯರು ಸ್ವಿಜರ್‌ಲ್ಯಾಂಡಿನಲ್ಲಿದ್ದಾಗ ಫಿರೋಜಗಾಂಧಿ ಅಲ್ಲೇ ಉಳಿದು ಅವರ ಆರೈಕೆ ಕೂಡ ಮಾಡಿದ್ದರು. ಆಗಲೇ ಇಂದಿರಾ ಮತ್ತು ಫಿರೋಜ ಪರಸ್ಪರ ಆಕರ್ಷಿತರಾಗಿದ್ದರು. ಈ ವಿಷಯ ಕಮಲಾದೇವಿಯವರಿಗೂ ತಿಳಿದಿತ್ತು. ಮುಂದೆ ಇಂಗ್ಲೆಂಡಿನಲ್ಲಿರುವಾಗ ಅವರಿಬ್ಬರೂ ಮತ್ತಷ್ಟು ಹತ್ತಿರವಾದರು.

ಇಂದಿರಾ ಪ್ಲೂರಸಿ ರೋಗದಿಂದ ಹಾಸಿಗೆ ಹಿಡಿದರು. ಸೆರೆಮನೆಯಲ್ಲಿದ್ದ ತಂದೆ ವಿಷಯ ತಿಳಿದು ಗಾಬರಿಯಾದರು. ಹಾಗೇ ಸ್ವಿಜರ್‌ಲ್ಯಾಂಡಿಗೆ ಹೋಗಲು ಸಲಹೆ

ನೀಡಿದರು. ಅದರಂತೆ ಇಂದಿರಾ ಕೆಲವು ದಿನ ಸ್ವಿಜರ್‌ಲ್ಯಾಂಡಿನಲ್ಲಿ ಕಳೆದರು. ಅಲ್ಲಿ ಅವರ ಆರೋಗ್ಯ ಪೂರ್ತಿಯಾಗಿ ಸುಧಾರಿಸಿತು. ನಂತರ ಅವರು ಇಂಗ್ಲೆಂಡಿಗೆ ಮರಳಿ ಹೋಗಲಿಲ್ಲ. ಭಾರತ ಅವರನ್ನು ಕೈಬೀಸಿ ಕರೆಯುತ್ತಿತ್ತು. ಸ್ವದೇಶದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳವಳಿಗೆ ಅವರು ಧುಮುಕಬೇಕಿತ್ತು. ಹಾಗಾಗಿ ಅವರು ಮರಳಿ ಭಾರತಕ್ಕೆ ಹೊರಟರು. ಅಲ್ಲಿಗೆ ಅವರು ಸಾಂಪ್ರದಾಯಿಕ ಅರ್ಥದ ವಿದ್ಯಾಭ್ಯಾಸಕ್ಕೆ ಮಂಗಳ ಹಾಡಿದಂತಾಯಿತು.

## ಮದುವೆ-ಮಕ್ಕಳು

ಇಂದಿರಾ ಭಾರತಕ್ಕೆ ಬಂದಾಗ ತಂದೆ ಜವಾಹರಲಾಲರು ಡೆಹರಾಡೂನ್ ಸೆರೆಮನೆಯಲ್ಲಿದ್ದರು. ಆಗಾಗ ತಂದೆಯನ್ನು ನೋಡಲು ಅನುಕೂಲವಾಗುವಂತೆ ಇಂದಿರಾ ಸಮೀಪದ ಮಸೂರಿಯಲ್ಲಿ ಉಳಿದುಕೊಂಡರು. ಒಮ್ಮೆ ತಂದೆಯನ್ನು ನೋಡಲು ಹೋದಾಗ ತಾನು ಫಿರೋಜಗಾಂಧಿಯವರನ್ನು ಮದುವೆಯಾಗಬೇಕೆಂದಿದ್ದೇನೆ ಎಂದರು. ತಂದೆಗೆ ಕೊಂಚ ಆಶ್ಚರ್ಯವಾಯಿತು. 'ನೀನು ಒಮ್ಮೆಲೆ ದುಡುಕಬೇಡ' ಎಂದು ತಂದೆ ಮಗಳಿಗೆ ಬುದ್ಧಿ ಹೇಳಿದರು. ಫಿರೋಜಗಾಂಧಿಯವರು ಪಾರ್ಸಿ ಎಂಬ ಕಾರಣಕ್ಕಾಗಿ ಅಲ್ಲ ಮದುವೆಯಂಥ ಮಹತ್ವದ ವಿಷಯದಲ್ಲಿ 'ದುಡುಕು ಸಲ್ಲ' ಎಂಬ ಸಲುವಾಗಿ.

ನೆಹರೂ ಕುಟುಂಬವೆಂದರೆ ವಿಶ್ವಕುಟುಂಬವಾಗಿತ್ತು. ನೆಹರೂರವರ ತಂಗಿ ಕೃಷ್ಣಾ ಜೈನನನ್ನು ಮದುವೆಯಾಗಿದ್ದರು. ಬಿ.ಕೆ. ನೆಹರೂ ಯುರೋಪಿಯನ್ನಳನ್ನು ಮದುವೆಯಾಗಿದ್ದಳು. ಅಲ್ಲದೆ ಒಂದೆರಡು ಮುಸ್ಲಿಂ ಸಂಬಂಧಗಳೂ ಅವರ ಕುಟುಂಬದಲ್ಲಿದ್ದವು. ಹಾಗಾಗಿ ಅಲ್ಲಿ ಜಾತಿ ಪಂಥಗಳ ಸಂಕುಚಿತ ಸೀಮೆ ಇದ್ದಿರಲೇ ಇಲ್ಲ. ಆದರೆ ಮಗಳ ಭವಿಷ್ಯ ಸುಗಮವಾಗಲೆಂಬ ಒಂದೇ ಒಂದು ಸದುದ್ದೇಶ ನೆಹರೂ ಅವರದಾಗಿತ್ತು. ಹಾಗಾಗಿ ಅವರು ಈ ಕುರಿತು ತಂಗಿ ಕೃಷ್ಣಾರ ಸಲಹೆ ಪಡೆಯಲು ಸೂಚಿಸಿದರು.

ಕೃಷ್ಣಾ ಮತ್ತು ಅವರ ಪತಿ ರಾಜಾ, ಇಂದಿರಾ ಅವರ ಅಭಿಪ್ರಾಯಕ್ಕೆ ತಮ್ಮ ಬೆಂಬಲ ನೀಡಿದರು. ಸಾವಿರದ ಒಂಬೈನೂರಾ ನಲವತ್ತೊಂದರಲ್ಲಿ ಜವಾಹರರ ಬಿಡುಗಡೆಯೂ ಆಯಿತು. ಆದರೆ ಸತ್ಯಾಗ್ರಹ ಯಾವ ಹೊತ್ತಿಗೆ ಸಿಡಿಯುತ್ತದೆಂದು ಹೇಳಲು ಬರುವಂತಿರಲಿಲ್ಲ. ಹಾಗಾಗಿ ಫಿರೋಜಗಾಂಧಿ ಮತ್ತು ಇಂದಿರಾ ಆದಷ್ಟು ಬೇಗ ಮದುವೆಯಾಗ ಬಯಸಿದ್ದರು. ಆದರೆ ಸುತ್ತಲ ಸಮಾಜದ ಸನಾತನಿಗಳು ಈ ಮದುವೆಯನ್ನು ವಿರೋಧಿಸಿದರು. ಆದರೆ ನೆಹರೂ ಅವರು "ಮದುವೆ ವಧೂವರರ ವೈಯುಕ್ತಿಕ ವಿಷಯ. ಅದು ಮತ್ಯಾರಿಗೂ ಸಂಬಂಧಿಸಿದ್ದಲ್ಲ" ಎಂದು ಪತ್ರಿಕಾ ಹೇಳಿಕೆ ಕೊಟ್ಟರು. ಅಲ್ಲದೇ ಈ ಕುರಿತು ಅವರು ಗಾಂಧೀಜಿಯವರ ಸಲಹೆ ಕೇಳಿದರು. ಗಾಂಧೀಜಿ ಹೃತ್ಪೂರ್ವಕವಾಗಿ ಆಶೀರ್ವದಿಸಿದರು.



**ಹಸೆಮಣೆಯ ಮೇಲೆ ಇಂದಿರಾ**

ಇಂದಿರಾ ಫಿರೋಜಗಾಂಧಿಯವರು ಆದರ್ಶ ದಂಪತಿಗಳಾಗಿದ್ದರು. ಇಬ್ಬರೂ ಜಾತಿ-ಪಂಥ ಮೂಢನಂಬಿಕೆಗಳಿಂದ ಹೊರತಾಗಿದ್ದರು. ಇಬ್ಬರೂ ಯುರೋಪಿನ ದೇಶಗಳಲ್ಲಿ ಸಂಚರಿಸಿದವರು. ಅಲ್ಲಿನ ಸಂಸ್ಕೃತಿಯಿಂದ ಪ್ರಭಾವಿತರಾದವರು. ಹಾಗೇ ಭಾರತೀಯ ಸಂಸ್ಕೃತಿಯಲ್ಲಿ ಬೇರು ಬಿಟ್ಟವರು. ಹಾಗಾಗಿ ಅವರಲ್ಲಿ ವಿಶಾಲ ಮನೋಭಾವ ನೆಲೆಗೊಂಡಿತ್ತು.

ಅವರು ಲಖನೌದಲ್ಲಿ ಬಿಡಾರ ಹೂಡಿದರು. ಅಲ್ಲಿ ಫಿರೋಜಗಾಂಧಿ 'ನ್ಯಾಷನಲ್ ಹೆರಾಲ್ಡ್' ಪತ್ರಿಕೆಯಲ್ಲಿ ಮ್ಯಾನೇಜರರಾಗಿ ಕೆಲಸ ಮಾಡುತ್ತಿದ್ದರು. ಇಂದಿರಾ ಲಖನೌ ಪಟ್ಟಣದ ಮಹಿಳೆಯರ ನಾಯಕಿಯಾದರು.

ಅದೇ ವರ್ಷದ ಆಗಸ್ಟ್ ಎಂಟರಂದು ಕಾಂಗ್ರೆಸ್ ಅಧಿವೇಶನದಲ್ಲಿ "ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಎಂಬ ಗೊತ್ತುವಳಿ ಪಾಸಾಯಿತು. ಪರಿಣಾಮವಾಗಿ ನೆಹರೂ, ಗಾಂಧಿ ಮುಂತಾಗಿ ದೇಶದ ಮುಂದಾಳುಗಳನ್ನೆಲ್ಲ ಬಂಧಿಸಿದರು. ಫಿರೋಜಗಾಂಧಿ ಭೂಗತ ಚಳವಳಿಯಲ್ಲಿ ತೊಡಗಿದ್ದರು. ಇಂದಿರಾ ಅಲಹಾಬಾದಿಗೆ ಬಂದರು. ಗಾಂಧೀಜಿಯವರು "ಮಾಡು ಇಲ್ಲವೆ ಮಡಿ" ಎಂದು ಕರೆ ಕೊಟ್ಟರು. ನಾಯಕರೆಲ್ಲ ಸೆರೆಯಲ್ಲಿದ್ದರೂ ಜನಸಾಮಾನ್ಯರೆಲ್ಲ ಮಕ್ಕಳು ಮುದುಕರೆನ್ನದೆ ಬೀದಿಗಿಳಿದು ಹಿಂದೆಂದೂ ನಡೆಯದಂಥ ಆಂದೋಲನ ನಡೆಸಿದರು.

ತಿಂಗಳೊಪ್ಪತ್ತಿನಲ್ಲೇ ಇಂದಿರಾಗಾಂಧಿಯವರು ಸಾರ್ವಜನಿಕ ಸಭೆಯೊಂದರಲ್ಲಿ ಭಾಷಣ ಮಾಡುತ್ತಿದ್ದಾಗ ಬಂಧನಕ್ಕೆ ಗುರಿಯಾದರು. ಅವರನ್ನು ನೈನಿತಾಲ ಸೆರೆಮನೆಯಲ್ಲಿ ಇಡಲಾಯಿತು. ಅಲ್ಲಿ ಅವರ ಅತ್ತೆ ವಿಜಯಲಕ್ಷ್ಮಿ ಪಂಡಿತ್ ಕೂಡಾ ಇದ್ದರು. ಇಂದಿರಾ ಅವರಿಗೆ ಸೆರೆಮನೆವಾಸದಿಂದ ಆನಂದವೇ ಆಯಿತಂತೆ. ಯಾಕೆಂದರೆ ಅವರು ಆ ಅನುಭವಕ್ಕೆ ಹಾತೊರೆಯುತ್ತಿದ್ದರಂತೆ. ಒಂಬತ್ತು ತಿಂಗಳ ನಂತರ ಜೈಲಿನಿಂದ ಅವರ ಬಿಡುಗಡೆಯಾಯಿತು.

ಮುಂದೆ ಇಂದಿರಾ ಗರ್ಭಿಣಿಯಾದರು. ಕೃಷ್ಣಾ ಅವರನ್ನು ಮುಂಬೈಗೆ ಕರೆದೊಯ್ದು ಬಾಣಂತನ ಮಾಡಿದರು. ಸಾವಿರದ ಒಂಬೈನೂರಾ ನಲವತ್ತನಾಲ್ಕರ ಆಗಸ್ಟ್

ಇಪ್ಪತ್ತರಂದು ರಾಜೀವ ಜನಿಸಿದರು. ನೆಹರು ಕುಟುಂಬದಲ್ಲಿ ಮಗುವಿನ ಆಗಮನದಿಂದಾಗಿ ಸಂಭ್ರಮ ತುಂಬಿಕೊಂಡಿತು. ಆಗಲೂ ನೆಹರು ಸೆರೆಮನೆಯಲ್ಲಿದ್ದರು. ಅಲ್ಲಿಂದಲೇ ಅವರು ಮೊಮ್ಮಗನಿಗೆ ಶುಭಾಶಯ ಕಳಿಸಿದರು. ರಾಜೀವ ಎಂಬ ಹೆಸರನ್ನೂ ಅವರೇ ಸೂಚಿಸಿದರು.

ಬಾಣಂತನ ಮುಗಿಸಿ ಇಂದಿರಾ ಲಖನೌಗೆ ಹಿಂದಿರುಗಿದರು. ಅಲ್ಲಿ ಫಿರೋಜ ಗಾಂಧಿಯವರು ಒಂದು ಮನೆಯನ್ನು ಹಿಡಿದಿದ್ದರು. ಮುಂದೆ ಅವರು "ನ್ಯಾಶನಲ್ ಹೆರಾಲ್ಡ್" ಪತ್ರಿಕೆಯನ್ನು ಪುನಃ ಪ್ರಾರಂಭಿಸಿದರು. ಸಾವಿರದ ಒಂಬೈನೂರಾ ನಲವತ್ತಾರರ ಹೊತ್ತಿಗೆ ನೆಹರೂರವರು ನಡುಗಾಲ ಸರ್ಕಾರದ ಪ್ರಧಾನಮಂತ್ರಿಗಳಾಗಿ ದಿಲ್ಲಿಯಲ್ಲಿರತೊಡಗಿದರು.

ನಾವೆಲ್ಲ ತಿಳಿದಂತೆ ಸಾವಿರದ ಒಂಬೈನೂರಾ ನಲವತ್ತೇಳು ಆಗಸ್ಟ್ ಹದಿನೈದರಂದು ನಮ್ಮ ದೇಶ ಸ್ವತಂತ್ರವಾಯಿತು. ಜೊತೆಗೆ ಅದು ಪಾಕಿಸ್ತಾನ ಮತ್ತು ಭಾರತ ಎಂದು ಎರಡು ಹೋಳಾಗಿ ಒಡೆಯಿತು. ಕೋಮು ಹಿಂಸೆ ಭುಗಿಲೆದ್ದಿತು. ಕಂಡ ಕಂಡಲ್ಲಿ ಲೂಟಿ-ಅತ್ಯಾಚಾರ, ಕೊಲೆ-ಸುಲಿಗೆಗಳು ದೇಶವನ್ನು ನರಕವನ್ನಾಗಿ ಮಾಡಿದವು. ಇದರಿಂದ ಬಾಪೂಜಿ ತುಂಬ ನೊಂದರು. ಶಾಂತಿ ಸ್ಥಾಪನೆಗಾಗಿ ಪಾದಯಾತ್ರೆಗೆ ತೊಡಗಿದರು. ಇಂದಿರಾಗಾಂಧಿಯವರಿಗೂ ಕೋಮು ಸೌಹಾರ್ದಕ್ಕಾಗಿ ಪ್ರಯತ್ನಿಸಲು ಹೇಳಿದರು. ಆಗ ಇಂದಿರಾ ತಮ್ಮ ಪುಟ್ಟ ಮಗನನ್ನು ಬಿಟ್ಟು ಹಗಲೂ ರಾತ್ರಿ ನಾಲ್ಕು ತಿಂಗಳ ಕಾಲ ಶಾಂತಿ ಸ್ಥಾಪನೆಗಾಗಿ ದುಡಿದರು. ಎಂಥ ಅಪಾಯಕಾರಿ ಸ್ಥಳವಿದ್ದರೂ ಅಲ್ಲಿಗೆ ಅಂಜದೆ ಹೋಗುತ್ತಿದ್ದರು. ಗಲಭೆಕಾರರ ನಡುವೆ ಇಂದಿರಾ ಬರಿಗೈಯಿಂದ ನಡೆದು ಹೋಗುತ್ತಿದ್ದರೆ, ಪುಂಡರು ತಲೆತಗ್ಗಿಸಿ ಚಾಕು ಚೂರಿಗಳನ್ನು ಕೆಳಗೆ ಹಾಕುತ್ತಿದ್ದರು. ಅವರ ವ್ಯಕ್ತಿತ್ವ ಅಷ್ಟು · ಪ್ರಭಾವಶಾಲಿಯಾಗಿತ್ತು.

ದೇಶ ಸ್ವತಂತ್ರವಾಗುವುದರೊಂದಿಗೆ ಜವಾಹರಲಾಲರ ಹೆಗಲಿಗೆ ಪ್ರಧಾನಿಯ ಜವಾಬ್ದಾರಿ ಬಂದಿತ್ತು. ನೆಹರುರವರು ತೀನ್‌ಮೂರ್ತಿಭವನದಲ್ಲಿ ಪ್ರಧಾನಿಯಾಗಿ ವಾಸಿಸಲು

ಬಂದರು. ಆಗ ಇಂದಿರಾ ಮತ್ತು ಫಿರೋಜಗಾಂಧಿ ಮಕ್ಕಳೊಂದಿಗೆ ಅಲ್ಲಿಗೆ ಬಂದರು. ಆದರೆ ಫಿರೋಜ ಗಾಂಧಿ ಅತ್ಯಂತ ಸ್ವಾಭಿಮಾನಿ ವ್ಯಕ್ತಿಯಾಗಿದ್ದರು. ಅವರಿಗೆ ನೆಹರುರವರ ಅಳಿಯನೆಂದು ಪ್ರಸಿದ್ಧಿ ಪಡೆಯುವುದು ಬೇಕಾಗಿರಲಿಲ್ಲ. ಅವರು ಸ್ವಂತ ಯೋಗ್ಯತೆಯಿಂದ ಮುಂದೆ ಬರಲು ಬಯಸುತ್ತಿದ್ದರು. ಹಾಗಾಗಿ ಮುಂದೆ ಅವರು ಲೋಕಸಭೆಗೆ ಆರಿಸಿ ಬಂದಾಗ ಲೋಕಸಭಾ ಸದಸ್ಯರಿಗೆಂದು ಇರುವ ಮನೆಯಲ್ಲಿ ವಾಸಿಸತೊಡಗಿದರು. ಮತ್ತು ಆಗಾಗ ಬಂದು ಹೆಂಡತಿ ಮಕ್ಕಳನ್ನು ಭೇಟಿಯಾಗಿ ಹೋಗುತ್ತಿದ್ದರು.

## ರಾಜಕಾರಣ

ರಾಜಕಾರಣ ಇಂದಿರಾಗಾಂಧಿಯವರ ರಕ್ತಗುಣವಾಗಿತ್ತು. ಅದನ್ನವರು ಬಿಡಲು ಸಾಧ್ಯವಿರಲಿಲ್ಲ. ಜವಾಹರರು ಪ್ರಧಾನಿಯಾದ ನಂತರ ಅವರ ಎಲ್ಲ ಕೆಲಸ ಕಾರ್ಯಗಳಲ್ಲಿ ಇಂದಿರಾ ಸದ್ದಿಲ್ಲದೆ ಸಹಾಯ ನೀಡುತ್ತಿದ್ದರು. ನೆಹರೂ ವಿದೇಶಯಾತ್ರೆಯಲ್ಲಿದ್ದಾಗ ಇಂದಿರಾ ತಂದೆಯ ನೆರಳಾಗಿರುತ್ತಿದ್ದರು. ಮನೆಗೆ ಬಂದು ಹೋಗುವ ಸ್ವದೇಶಿ-ವಿದೇಶಿ ಅತಿಥಿ ಅಭ್ಯಾಗತರ ಒಡನಾಟವೂ ಇರುತ್ತಿತ್ತು.

ಅವರ ರಾಜಕೀಯ ಬದುಕಿನ ಮೊದಲ ಮೆಟ್ಟಿಲಾಗಿ ಸಾವಿರದ ಒಂಬೈನೂರಾ ಐವ್ವತ್ತೈದರಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಮತ್ತು ಕೇಂದ್ರ ಇಲೆಕ್ಷನ್ ಕಮಿಟಿಗಳಿಗೆ ಆಯ್ಕೆಯಾದರು. ಮುಂದೆ ಅಲಹಾಬಾದ್ ಸಿಟಿ ಕಾಂಗ್ರೆಸ್‌ನ ಅಧ್ಯಕ್ಷೆಯಾದರು. ನಂತರ ಸೆಂಟ್ರಲ್ ಪಾರ್ಲಿಮೆಂಟರಿ ಬೋರ್ಡಿನಲ್ಲಿ ಸದಸ್ಯೆಯಾಗಿ ನೇಮಕ ಹೊಂದಿದರು. ಸಾವಿರದ ಒಂಬೈನೂರಾ ಐವತ್ತೊಂಬತ್ತರ ಫೆಬ್ರುವರಿ ಎಂಟರಂದು ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾದರು.

ಇಲ್ಲಿ ಒಂದು ವಿಷಯವನ್ನು ನಾವು ನೆನಪಿಡಲೇಬೇಕು. ಮೋತಿಲಾಲರು ಜವಾಹರಲಾಲರನ್ನು ತಮ್ಮ ಉತ್ತರಾಧಿಕಾರಿಯೆಂದು ಬಹಿರಂಗವಾಗಿ ಒಪ್ಪಿಕೊಂಡಿದ್ದರು. ಕಾಂಗ್ರೆಸ್‌ನ ಅಧ್ಯಕ್ಷತೆಯನ್ನು ತಾವೇ ಜವಾಹರರಿಗೆ ವಹಿಸಿಕೊಟ್ಟಿದ್ದರು. ಆದರೆ ಜವಾಹರರು

ಇಂದಿರಾರನ್ನು ರಾಜಕೀಯಕ್ಕೆ ಎಳೆದು ತರಲಿಲ್ಲ. ಅವರು ತಮ್ಮ ಪ್ರಧಾನಮಂತ್ರಿ ಸ್ಥಾನವನ್ನು ಮಗಳಿಗೆ ವಹಿಸುವ ಯೋಚನೆ ಮಾಡಿರಲೂ ಇಲ್ಲ. ತಮ್ಮ ನಂತರ ದೇಶದ ಮುಂದಾಳನ್ನು ಜನರೇ ಆರಿಸಿಕೊಳ್ಳಲಿ ಎಂದು ಅವರು ತೀರ್ಮಾನಿಸಿದರು.

ಆದರೆ ಇಂದಿರಾಗಾಂಧಿಯವರಿಗೆ ರಾಜಕೀಯ ಜಾಣತನವಿತ್ತು. ಸಮಸ್ಯೆಗಳನ್ನು ತಳಮುಟ್ಟಿ ಅರ್ಥ ಮಾಡಿಕೊಳ್ಳುವಂಥ ಶಕ್ತಿ ದೃಢನಿರ್ಧಾರಗಳಿದ್ದವು. ಆದ್ದರಿಂದ ಸಹಜವಾಗಿ ಅವರು ವಿವಿಧ ಹುದ್ದೆಗಳಿಗೆ ಮೇಲೇರುತ್ತ ಬಂದರು. ಅವರು ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾದ ಅವಧಿಯಲ್ಲಿ ಎರಡು ನಿರ್ಣಯಗಳನ್ನು ತೆಗೆದುಕೊಂಡರು. ಮೊದಲನೆಯದು ಮುಂಬೈ ರಾಜ್ಯ ಕುರಿತಾದದ್ದು. ಭಾಷೆಯ ಆಧಾರದಿಂದ ಮಹಾರಾಷ್ಟ್ರ ಮತ್ತು ಗುಜರಾತ್ ರಾಜ್ಯಗಳೆಂದು ವಿಂಗಡಿಸಿದರು. ಇದಕ್ಕೆ ನೆಹರೂ ಅವರ ಸಣ್ಣ ವಿರೋಧವಿತ್ತು. ಆದರೂ ಜನರ ಭಾವನೆಗಳಿಗೆ ಮಹತ್ವ ಕೊಟ್ಟು ಇಂದಿರಾ ತಮ್ಮ ನಿರ್ಧಾರವನ್ನೇ ನೆರವೇರಿಸಿದರು. ಎರಡನೆಯದು ಕೇರಳದ ಎಂ.ಇ.ಎಸ್. ನಂಬೂದ್ರಿಪಾದರ ಕಮ್ಯುನಿಸ್ಟ್ ಸರಕಾರವನ್ನು ವಜಾ ಮಾಡಿದ್ದು. ಆದರೆ ಈ ನಿರ್ಧಾರಕ್ಕೂ ನೆಹರೂ ಅವರ ವಿರೋಧವಿತ್ತು. ಆದರೂ ಕಮ್ಯುನಿಸ್ಟ್ ಸರಕಾರ ತೆಗೆದು, ಅಲ್ಲಿ ರಾಷ್ಟ್ರಪತಿ ಆಳ್ವಿಕೆ ಘೋಷಿಸಲಾಯಿತು. ನಂತರ ಅಲ್ಲಿ ಚುನಾವಣೆ ನಡೆದು ಕಾಂಗ್ರೆಸ್ ಸರಕಾರ ಆಡಳಿತಕ್ಕೆ ಬಂತು.



ಆಗಲೇ ಇಂದಿರಾಗೆ ಬಹು ದೊಡ್ಡ ಆಘಾತವೊಂದು ಕಾದಿತ್ತು. ಸಾವಿರದ ಒಂಬೈನೂರಾ ಅರವತ್ತರ ಸೆಪ್ಟೆಂಬರ್ ಎರಡರಂದು ಫಿರೋಜಗಾಂಧಿಯವರಿಗೆ ಹೃದಯವಿಕಾರ ಕಾಣಿಸಿಕೊಂಡಿತು. ಅವರು ಅದನ್ನು ಲಕ್ಷಿಸದೆ ಪಾರ್ಲಿಮೆಂಟ್‌ಗೆ ಹೋದರು. ಐದು ದಿನಗಳ ನಂತರ ಎದೆ ನೋವು ಉಲ್ಬಣಿಸಿತು. ತಾವೇ ಆಸ್ಪತ್ರೆಗೆ ಬಂದು ಕುಸಿದುಬಿದ್ದರು. ಆಗ ಇಂದಿರಾ ಕೇರಳದಲ್ಲಿದ್ದರು. ಈ ಸುದ್ದಿ ತಿಳಿದ ತಕ್ಷಣ ಅವರು ಧಾವಿಸಿ ಬಂದರು. ರಾತ್ರಿಯುದ್ದಕ್ಕೂ ಫಿರೋಜಗಾಂಧಿಯವರ ಸ್ಥಿತಿ ಕೆಡುತ್ತ ಹೋಯಿತು. ಬೆಳಗಾಗುವ ಹೊತ್ತಿಗೆ ಇಂದಿರಾರ ಕೈಹಿಡಿದುಕೊಂಡೇ ಅವರು ಕೊನೆಯುಸಿರೆಳೆದರು.

ಇಂದಿರಾಗಾಂಧಿಯವರ ಬದುಕಿನಲ್ಲಿ ಸಾವು ಪದೇ ಪದೇ ತನ್ನ ಕೈಚಳಕ ತೋರಿದೆ. ಅವರ ಗಟ್ಟಿತನವನ್ನು ಮತ್ತೆ ಮತ್ತೆ ಪರೀಕ್ಷಿಸಿದೆ. ಪತಿಯ ಮರಣದ ಆಘಾತದಿಂದ ಕೊಂಚ ಚೇತರಿಸಿಕೊಳ್ಳುವಷ್ಟರಲ್ಲೇ ತಂದೆಯ ಸಾವು ಅವರ ಮೇಲೆ ಬರಸಿಡಿಲಿನಂತೆ ಬಂದೆರಗಿತು. ಜವಾಹರಲಾಲರು ಸಾವಿರದ ಒಂಬೈನೂರಾ ಅರವತ್ನಾಲ್ಕು ಮೇ ಇಪ್ಪತ್ತೇಳರಂದು ಹೃದಯಾಘಾತದಿಂದ ನಿಧನ ಹೊಂದಿದರು. ಇಂದಿರಾರಿಗೆ ನೆಹರು ತಂದೆ ಮಾತ್ರವಾಗಿರಲಿಲ್ಲ, ಗೆಳೆಯರಾಗಿದ್ದರು. ವಿಶ್ವಮಾನವತೆಯನ್ನು ಕಲಿಸಿದ ಗುರುವಾಗಿದ್ದರು. ಅವರ ಸಾವು ಇಂದಿರಾ ಅವರ ಪಾಲಿಗೆ ಎಲ್ಲಕ್ಕಿಂತ ಮಿಗಿಲಾದ ಪೆಟ್ಟಾಗಿತ್ತು. ಅವರು ಬೆಳಗಾಗುವವರೆಗೂ ತಂದೆಯ ಶರೀರದ ಬಳಿ ಕಂಗೆಟ್ಟು ಕುಳಿತರು. ಅದೆಷ್ಟೇ ಧೈರ್ಯ ವಹಿಸಿದರೂ ತಂದೆಯ ಚಿತೆಗೆ ಬೆಂಕಿ ಇಡುತ್ತಿದ್ದಂತೆ ಕುಸಿದುಬಿದ್ದರು. ಆದರೂ ಮತ್ತೊಂದು ಕ್ಷಣಕ್ಕೆ ಸಾವರಿಸಿಕೊಂಡು ಮೇಲೆದ್ದರು.

ಅದೇ ಹೊತ್ತಿಗೆ ಶ್ರೀ ಲಾಲಬಹಾದ್ದೂರ್ ಶಾಸ್ತ್ರಿಯವರು ಪ್ರಧಾನಮಂತ್ರಿಯಾಗಿದ್ದರು. ಅವರು ವಿದೇಶ ಮಂತ್ರಿಯಾಗುವಂತೆ ಇಂದಿರಾರನ್ನು ಆಹ್ವಾನಿಸಿದರು. ಆದರೆ ಇಂದಿರಾ ಒಪ್ಪಲಿಲ್ಲ. ಅವರಿಗೆ ಈ ಜಗತ್ತೇ ಶೂನ್ಯವಾಗಿತ್ತು. ಆಮೇಲೆ ಕೆಲ ದಿನಗಳ ನಂತರ ಚೇತರಿಸಿಕೊಂಡು ಕೇಂದ್ರದ ಆಕಾಶವಾಣಿ ಮತ್ತು ಪ್ರಸಾರ ಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು.

ಬಾನುಲಿ ಮಂತ್ರಿಯಾಗಿ ಇಂದಿರಾಗಾಂಧಿಯವರು ಕೆಲವು ಮಹತ್ವದ ಸುಧಾರಣೆ ತಂದರು. ಜನಸಾಮಾನ್ಯರ ಬದುಕನ್ನು ಹಸನುಗೊಳಿಸಲು ಬಾನುಲಿಯನ್ನು ಬಳಸಿಕೊಳ್ಳಬೇಕೆಂದು ಬಯಸಿದರು. ಅದರಂತೆ ಬಾನುಲಿಯನ್ನು ಕುಟುಂಬ ಯೋಜನೆಯ ಪ್ರಚಾರಕ್ಕಾಗಿ ಬಳಸಿಕೊಂಡರು. ಬಾನುಲಿ ಕೇಂದ್ರಗಳ ಸಾಮರ್ಥ್ಯವನ್ನು ಹೆಚ್ಚಿಸಿದರು. ಸುಲಭ ಬೆಲೆಯ ರೇಡಿಯೊ ತಯಾರಿಕೆಯನ್ನು ಪ್ರೋತ್ಸಾಹಿಸಿದರು. ಇದರಿಂದಾಗಿ ಅತ್ಯಂತ ಸಾಮಾನ್ಯ ಜನರೂ ಬಾನುಲಿಯ ಪ್ರಯೋಜನ ಪಡೆಯುವಂತಾಯಿತು. ಸಾವಿರದ ಒಂಬೈನೂರಾ ಅರವತ್ತೈದರಲ್ಲಿ ಪಾಕಿಸ್ತಾನ ಭಾರತದೊಂದಿಗೆ ಯುದ್ಧ ಸಾರಿತು. ಆಗ

ಜನರಲ್ಲಿ ದೇಶಾಭಿಮಾನವನ್ನೂ, ಭಾವೈಕ್ಯತೆಯನ್ನೂ ಜಾಗೃತಗೊಳಿಸಬೇಕಾಗಿತ್ತು. ಇಂದಿರಾರವರ ನೇತೃತ್ವದಲ್ಲಿ ಆಕಾಶವಾಣಿಯು ಈ ಕೆಲಸವನ್ನು ಬಹು ಸಮರ್ಥವಾಗಿ ನೆರವೇರಿಸಿತು. ಅಲ್ಲದೆ ಈ ಸಂದರ್ಭದಲ್ಲಿ ಅವರು ಯುದ್ಧರಂಗಕ್ಕೆ ಹೋಗಿ ಸೈನಿಕರನ್ನು ಹುರಿದುಂಬಿಸಿದ್ದನ್ನು ಯಾರೂ ಮರೆಯುವಂತಿಲ್ಲ.

ಸಾವಿರದ ಒಂಬೈನೂರಾ ಅರವತ್ತಾರು ಜನವರಿ ಹತ್ತರಂದು ರಷ್ಯಾದ ತಾಷ್ಕೆಂಟಿನಲ್ಲಿ ಭಾರತ ಮತ್ತು ಪಾಕಿಸ್ತಾನಗಳು ಯುದ್ಧನಿಲುಗಡೆ ಒಪ್ಪಂದಕ್ಕೆ ಬಂದವು. ಭಾರತದ ಪರವಾಗಿ ಸಹಿ ಹಾಕಿದ ಪ್ರಧಾನಿ ಲಾಲಬಹಾದ್ದೂರ್ ಶಾಸ್ತ್ರಿಯವರು ಅದೇ ರಾತ್ರಿ ಅಲ್ಲೇ ಹೃದಯಾಘಾತದಿಂದ ತೀರಿಕೊಂಡರು.

## ಪ್ರಧಾನಿಯಾಗಿ

ಮತ್ತೆ ಪ್ರಧಾನಿ ಹುದ್ದೆ ಖಾಲಿಯಾಯಿತು. ಆ ಸ್ಥಾನಕ್ಕಾಗಿ ಸ್ಪರ್ಧೆ ನಡೆದು ಇಂದಿರಾಗಾಂಧಿಯವರು ಆಯ್ಕೆಯಾದರು. ಸಾವಿರದ ಒಂಬೈನೂರಾ ಅರವತ್ತಾರು ಜನವರಿ ಇಪ್ಪತ್ತ ನಾಲ್ಕರಂದು ಭಾರತದ ಮೊಟ್ಟ ಮೊದಲ ಮಹಿಳಾ ಪ್ರಧಾನಿಯಾಗಿ ಅಧಿಕಾರ ಸ್ವೀಕರಿಸಿದರು.

ನೆಹರೂ ಅವರಿಗೆ ಇಡೀ ದೇಶವೇ ನಿಷ್ಠವಾಗಿತ್ತು. ಜನರಲ್ಲಿ ಕಾಂಗ್ರೆಸ್ಸಿನ ಬಗ್ಗೆ ಒಂದು ರೀತಿಯ ಭಕ್ತಿಯಿತ್ತು. ಸ್ವಾತಂತ್ರ್ಯದ ಕನಸು ನನಸಾದಾಗ ಇನ್ನು ನಮ್ಮ ಬದುಕು ಬಂಗಾರವಾಗಿ ಬಿಡುತ್ತದೆ ಎಂಬ ಭ್ರಮೆಯಿತ್ತು. ಆದರೆ ಹತ್ತೊಂಬತ್ತು ವರ್ಷಗಳ ಕಾಂಗ್ರೆಸ್ ಆಡಳಿತದಿಂದ ಸಮಾಧಾನಕರವಾದ ಸುಧಾರಣೆ ಸಾಧ್ಯವಾಗಿರಲಿಲ್ಲ. ರಾಜಕಾರಣಿಗಳಲ್ಲಿ ಸ್ವಾರ್ಥ ತುಂಬಿಕೊಳ್ಳತೊಡಗಿತ್ತು. ತತ್ವ, ಆದರ್ಶಗಳು ಗಾಳಿಗೆ ತೂರಿ ಹೋಗಿದ್ದವು. ಜನರು ಈಗ ಭಾಷೆಯ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ, ಪ್ರಾಂತ್ಯದ



**ಪ್ರಧಾನ ಮಂತ್ರಿಯಾಗಿ ಪ್ರಮಾಣವಚನ ಸ್ವೀಕಾರ**

ಹೆಸರಿನಲ್ಲಿ ಪರಸ್ಪರ ಕಚ್ಚಾಡತೊಡಗಿದ್ದರು. ಈ ಎಲ್ಲ ಸಮಸ್ಯೆಗಳನ್ನು ಪರಿಹರಿಸುವುದು ಸುಲಭವಾಗಿರಲಿಲ್ಲ. ಆದರೂ ಇಂದಿರಾಗಾಂಧಿಯವರು ಅವುಗಳನ್ನೆಲ್ಲ ಸಮರ್ಥವಾಗಿ ಎದುರಿಸಿದರು. ಮಾತ್ರವಲ್ಲ ಹದಿನೈದು ವರ್ಷಗಳ ಕಾಲ ಪ್ರಧಾನಿಯಾಗಿ ಕಾರ್ಯ ನಿರ್ವಹಿಸಿದರು.

## ಪ್ರಮುಖ ಸಾಧನೆಗಳು

ಅವರು ಪ್ರಧಾನಿಯಾದ ಒಂದೇ ವರ್ಷಕ್ಕೆ ಸಾರ್ವತ್ರಿಕ ಚುನಾವಣೆ ಜರುಗಿತು. ಅದರಲ್ಲಿ ಕಾಂಗ್ರೆಸ್ಸು ಬಹುಮತ ಗಳಿಸಿತು ಇಂದಿರ ಎರಡನೇ ಬಾರಿಗೆ ಪ್ರಧಾನಿಯಾದರು. ನಂತರ ಇಂದಿರಾಗಾಂಧಿಯವರು ಇಡೀ ಜಗತ್ತೇ ಬೆರಳು ಕಚ್ಚುವಂತೆ ಕೆಲವು ದಿಟ್ಟ ಹೆಜ್ಜೆಗಳನ್ನಿಟ್ಟರು. ಅವರು ತಂದೆಯಂತೆಯೇ ಸಮಾಜವಾದದಲ್ಲಿ ನಂಬಿಕೆಯುಳ್ಳವರು.

ಬಡವರ, ದುರ್ಬಲರ ಏಳಿಗೆಗಾಗಿ ಹೆಚ್ಚು ಕಾಳಜಿ ಉಳ್ಳವರು. ಹಣಕಾಸು ಸೌಲಭ್ಯ ಬಡವರಿಗೂ ದೊರೆಯುವಂತೆ ಬ್ಯಾಂಕುಗಳ ಮೇಲೆ ಸರಕಾರದ ಹಿಡಿತವಿರಬೇಕೆಂದು ಬಯಸಿದರು. ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಿಸುವುದು ಅನಿವಾರ್ಯವಾಗಿತ್ತು. ಆದರೆ ಇದಕ್ಕೆ ಅನೇಕ ಮುಖಂಡರ ವಿರೋಧವಿತ್ತು.

ಸಾವಿರದ ಒಂಬೈನೂರಾ ಅರವತ್ತೊಂಬತ್ತು ಜುಲೈ ಹತ್ತರಂದು ಬೆಂಗಳೂರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಈ ಕುರಿತು ಚರ್ಚೆ ನಡೆಯಿತು. ಜುಲೈ ಹದಿನಾರರಂದು ಇಂದಿರಾ ಅವರು ಮುರಾರ್ಜಿ ದೇಸಾಯಿಯವರಿಂದ ಅರ್ಥಖಾತೆಯನ್ನು ಕಸಿದುಕೊಂಡರು. ಜುಲೈ ೧೯ ರಂದು ದೇಶದ ಪ್ರಮುಖ ಹದಿನಾಲ್ಕು ಬ್ಯಾಂಕುಗಳ ರಾಷ್ಟ್ರೀಕರಣವನ್ನು ಘೋಷಿಸಿದರು. ಅದೇ ದಿನ ಕಾಂಗ್ರೆಸ್ ಅಧ್ಯಕ್ಷರಾದ ಎಸ್. ನಿಜಲಿಂಗಪ್ಪನವರು ಇಂದಿರಾರವರನ್ನು ಕಾಂಗ್ರೆಸ್‌ನಿಂದ ಹೊರ ಹಾಕಿದರು. ಲೋಕಸಭೆಯಲ್ಲಿ ಎಪ್ಪತ್ತು ಮಂದಿ ಸದಸ್ಯರು ಬೇರೆ ಪಕ್ಷದವರಾದ್ದರಿಂದ ಸರಕಾರ ಬೀಳುವ ಸ್ಥಿತಿ ಬಂತು. ಆಗ ಕಮ್ಯುನಿಷ್ಟರು ಮತ್ತು ಡಿಎಂಕೆ ಸದಸ್ಯರು ಬೆಂಬಲ ಕೊಟ್ಟರು. ಹಾಗಾಗಿ ಇಂದಿರಾ ಅವರು ಪ್ರಧಾನಿಯಾಗಿ ಮುಂದುವರೆದರು.

ಅವರ ಇನ್ನೊಂದು ರಚನಾತ್ಮಕ ನಿರ್ಧಾರವೆಂದರೆ ರಾಜಧನ ರದ್ಧತಿ ಪದ್ಧತಿ ಕುರಿತಾದದ್ದು. ಬ್ರಿಟಿಷರು ಈ ದೇಶ ಬಿಟ್ಟು ಹೋಗುವಾಗ ಇಲ್ಲಿರುವ ನೂರಾರು ಸಂಸ್ಥಾನಗಳನ್ನು ಸಂಸ್ಥಾನಿಕರಿಗೇ ಹಿಂತಿರುಗಿಸಿದ್ದರು. ಆಗ ಗೃಹಮಂತ್ರಿಯಾದ ಸರ್ದಾರ ವಲ್ಲಭಬಾಯಿ ಪಟೇಲರ ಪ್ರಯತ್ನದಿಂದಾಗಿ ಅವೆಲ್ಲ ಭಾರತ ಒಕ್ಕೂಟದಲ್ಲಿ ವಿಲೀನವಾಗಿದ್ದವು. ಆಗಿನಿಂದ ಆ ಸಂಸ್ಥಾನಿಕರಿಗೆ ವರ್ಷಧನ ಕೊಡುವ ಪದ್ಧತಿ ಬೆಳೆದು ಬಂದಿತ್ತು. ಆ ಕಾರಣವಾಗಿ ದೇಶ ಪ್ರತಿವರ್ಷ ಕೋಟ್ಯಂತರ ರೂಪಾಯಿಗಳ ವೆಚ್ಚ ಭರಿಸಬೇಕಾಗಿತ್ತು. ರಾಜಮನೆತನದವರು ಈ ಹಣವನ್ನು ತಮ್ಮ ದುಂದುಗಾರಿಕೆಗಾಗಿ ಪೋಲು ಮಾಡುತ್ತಿದ್ದರು. ಇದನ್ನು ಮನಗಂಡ ಇಂದಿರಾ ರಾಜಧನ ಪದ್ಧತಿಯನ್ನು ರದ್ದುಗೊಳಿಸಿದರು.

ಈ ಎಲ್ಲ ದಿಟ್ಟ ನಿರ್ಧಾರಗಳ ಪರಿಣಾಮವಾಗಿ ಸಾವಿರದ ಒಂಬೈನೂರಾ ಎಪ್ಪತ್ತೊಂದರ ಮಾರ್ಚ್‌ನಲ್ಲಿ ನಡೆದ ನಡುಗಾಲ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಭಾರೀ ವಿಜಯ ದೊರೆಯಿತು. ಲೋಕಸಭೆಯ ಐದುನೂರಾ ಹದಿನೆಂಟು ಸ್ಥಾನಗಳಲ್ಲಿ ಮುನ್ನೂರಾ ಐವತ್ತು ಸ್ಥಾನಗಳು ಲಭಿಸಿದವು. ಮೂರನೇ ಬಾರಿಗೆ ಅವರು ಪ್ರಧಾನಿಯಾದರು.

ಅದೇ ವರ್ಷ ಡಿಸೆಂಬರಿನಲ್ಲಿ ಪಾಕಿಸ್ತಾನ ನಮ್ಮ ಮೇಲೆ ಯುದ್ಧಕ್ಕೆ ಬಂತು. ದೇಶ ಸ್ವತಂತ್ರವಾಗುವಾಗ ಪೂರ್ವ ಬಂಗಾಲ ಮತ್ತು ಪಶ್ಚಿಮ ಪಂಜಾಬುಗಳು ಪಾಕಿಸ್ತಾನಕ್ಕೆ ಸೇರಿದ್ದವು. ಒಂದೇ ದೇಶದ ಎರಡು ಭಾಗಗಳ ನಡುವೆ ಸಾವಿರಾರು ಮೈಲಿಗಳ ಅಂತರವಿತ್ತು. ಪಶ್ಚಿಮ ಪಾಕಿಸ್ತಾನದ ಮಿಲಿಟರಿ ಅಧಿಕಾರಿಗಳು ಪೂರ್ವ ಪಾಕಿಸ್ತಾನಿಗಳ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದರು. ಆ ಪ್ರದೇಶವನ್ನು ತುಂಬಾ ಕಡೆಗಣಿಸಿದ್ದರು. ಆದ್ದರಿಂದ ಅಲ್ಲಿನ ಜನತೆ ರೊಚ್ಚಿಗೆದ್ದು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದರು. ಅದರ ಪರಿಣಾಮವಾಗಿ ಲಕ್ಷಾಂತರ ನಿರಾಶ್ರಿತರು ಭಾರತಕ್ಕೆ ಬಂದರು. ಅವರಿಗೆ ಆಶ್ರಯ ಕೊಡುವುದು ಭಾರತಕ್ಕೆ ಅನಿವಾರ್ಯವಾಗಿತ್ತು. ಆ ಕಾರಣದಿಂದ ಪಾಕಿಸ್ತಾನ ನಮ್ಮ ಮೇಲೆ ಯುದ್ಧಕ್ಕೆ ಬಂತು. ಪೂರ್ವ ಮತ್ತು ಪಶ್ಚಿಮ ಗಡಿಗಳಲ್ಲಿ ಘೋರ ಯುದ್ಧ ನಡೆಯಿತು. ಎರಡೇ ವಾರದಲ್ಲಿ ಪಾಕಿಸ್ತಾನ ಸೋತು ಬಂಗ್ಲಾದೇಶದ ಉದಯವಾಯಿತು. ಬಾಂಗ್ಲಾದೇಶದ ಗಣತಂತ್ರಕ್ಕೆ ಭಾರತ ಎಲ್ಲರಿಗಿಂತ ಮೊದಲು ಮ್ಯಾನ್ಯತೆ ನೀಡಿತು.

ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನಿಯಾಗಿ ತೆಗೆದುಕೊಂಡ ಹಲವು ನಿರ್ಧಾರಗಳನ್ನು ಇಡೀ ಜಗತ್ತೇ ಬೆರಗಾಗಿ ನೋಡಿತು. ಈ ಯುದ್ಧದಲ್ಲಿ ಅವರು ತೋರಿದ ಅಪ್ರತಿಮ ಧೈರ್ಯ ಕಾರ್ಯಕ್ಷಮತೆಗಾಗಿ ದೇಶ ವಿದೇಶಗಳ ಜನರೆಲ್ಲ ಹಾಡಿ ಹೊಗಳಿದರು. ಸ್ವದೇಶದಲ್ಲಂತೂ ಅವರು ದುರ್ಗೆಯ ಅಪರಾವತಾರವೆನಿಸಿದರು. ಜನರು ತಮ್ಮ ಪ್ರೀತಿಯ ದ್ಯೋತಕವಾಗಿ ಸಾವಿರದ ಒಂಬೈನೂರಾ ಎಪ್ಪತ್ತೊಂದು, ಡಿಸೆಂಬರ್ ಹದಿನೆಂಟರಂದು ಭಾರತದ ಅತ್ಯುಚ್ಛ ಪ್ರಶಸ್ತಿಯಾದ "ಭಾರತ ರತ್ನ" ಪದವಿ ನೀಡಿ ಇಂದಿರಾರನ್ನು ಗೌರವಿಸಿದರು.

ವಿಜ್ಞಾನ ತಂತ್ರಜ್ಞಾನಗಳಿಗೆ ನೆಹರೂರವರು ಕೊಟ್ಟ ಪ್ರೋತ್ಸಾಹವನ್ನು ಇಂದಿರಾರವರು ಮುಂದುವರೆಸಿದರು. ಅಣುಶಕ್ತಿ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ಕೊಟ್ಟರು. ಹಾಗೆಂದು ವಿನಾಶಕಾರಿ ಅಣುಬಾಂಬನ್ನು ತಯಾರಿಸುವ ಉದ್ದೇಶವಿರಲಿಲ್ಲ. ಆದರೆ ಶಾಂತಿಕಾಲದ ಅಣುಶಕ್ತಿ ಬಳಕೆ ಆಗ ಅನಿವಾರ್ಯವಾಗಿತ್ತು. ನಾಗಾಲೋಟದಿಂದ ಓಡುತ್ತಿರುವ



**ಭಾರತರತ್ನ ಪ್ರಶಸ್ತಿ**

ಜಗತ್ತಿನೊಂದಿಗೆ ನಮ್ಮ ದೇಶವೂ ಹೆಜ್ಜೆ ಕೂಡಿಸಲೇಬೇಕಿತ್ತು. ಹಾಗಾಗಿ ಸಾವಿರದ ಒಂಬೈನೂರಾ ಎಪ್ಪತ್ತನಾಲ್ಕರಲ್ಲಿ ಪ್ರಪ್ರಥಮವಾಗಿ ರಾಜಸ್ಥಾನದ ಪೋಖರಾನ ಎಂಬಲ್ಲಿ ಅಣು ಸಾಧನ ಸಿಡಿಸಿ ಅವರು ಪರಮಾಣುಯುಗಕ್ಕೆ ದೇಶವನ್ನು ಕೊಂಡೊಯ್ದರು.

ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನಿಯಾಗಿ ಹಲವಾರು ದೇಶಗಳ ಪ್ರವಾಸ ಕೈಗೊಂಡಿದ್ದರು. ವಿದೇಶಗಳಲ್ಲಿ ಅವರ ವರ್ಚಸ್ಸು ಅಪಾರವಾಗಿತ್ತು. ಅಮೆರಿಕ, ರಷ್ಯಾ ಮುಂತಾಗಿ ಹಲವಾರು ದೇಶಗಳಲ್ಲಿ ಸಂಚರಿಸಿ ಅಲ್ಲಿನ ಪ್ರಗತಿಯನ್ನು ಗಮನಿಸಿ

ಅಂಥ ಒಂದು ಅಭಿವೃದ್ಧಿಯನ್ನು ನಮ್ಮಲ್ಲೂ ತರಲು ಹೆಣಗಾಡುತ್ತಿದ್ದರು. ಜೊತೆಗೆ ಹಲವಾರು ವಿದೇಶೀ ಗೌರವಗಳೂ ಅವರಿಗೆ ದೊರೆತಿದ್ದವು. ಸಾವಿರದ ಒಂಬೈನೂರಾ ಎಪ್ಪತ್ತರಲ್ಲಿ ಮತ್ತು ಎಪ್ಪತ್ತೆರಡರಲ್ಲಿ ಸಂಯುಕ್ತ ರಾಷ್ಟ್ರ ಸಂಘದಲ್ಲಿ ಇಂದಿರಾ ಅವರು ಉಪನ್ಯಾಸ ನೀಡಿದರು. ಸಾವಿರದ ಒಂಬೈನೂರಾ ಎಂಬತ್ಮೂರರಲ್ಲಿ ನೂರಾ ಒಂದು ಅಲಿಪ್ತ ರಾಷ್ಟ್ರಗಳ ಸಮ್ಮೇಳನದ ಅಧ್ಯಕ್ಷೆಯಾಗಿದ್ದರು. ಅದೇ ವರ್ಷ "ಒಲಂಪಿಕ್ಸ್ ಗೋಲ್ಡ್ ಆರ್ಡರ್" ನಿಂದ ಗೌರವಿಸಲ್ಪಟ್ಟರು. ಎಲ್ಲಕ್ಕಿಂತ ಮುಖ್ಯವಾಗಿ ಅವರ ಅಲಿಪ್ತ ವಿದೇಶಾಂಗ ನೀತಿ, ಜಗತ್ತಿನಾದ್ಯಂತ ಅವರಿಗೆ ತುಂಬಾ ಗೌರವವನ್ನು ತಂದುಕೊಟ್ಟಿತು. ಅಲಿಪ್ತ ನೀತಿಯೆಂದರೆ ಅಮೇರಿಕಾ ಅಥವಾ ರಷ್ಯಾದಂಥ ಯಾವುದೇ ಶಕ್ತಿಬಣಗಳಿಗೆ ಸೇರದಿರುವುದು.

ಹೀಗೆ ಒಬ್ಬ ಮಹಿಳಾ ಪ್ರಧಾನಿಯಾಗಿ ಇಂದಿರಾಗಾಂಧಿಯವರ ಸಾಧನೆಗಳು ನೂರಾರು ಇವೆ. ಆದರೆ ನಮ್ಮ ದೇಶದ ಆಡಳಿತ ಸುಲಭವಾಗಿರಲಿಲ್ಲ. ಒಂದು ಸಮಸ್ಯೆಯನ್ನು ಪರಿಹರಿಸುವಷ್ಟರಲ್ಲಿ ಹತ್ತು ಸಮಸ್ಯೆಗಳು ಧುತ್ತೆಂದು ಎದುರಾಗುತ್ತಿದ್ದವು. ಒಬ್ಬನ ಹಿತ ಚಿಂತಿಸಿದರೆ ಇನ್ನೊಬ್ಬನು ಸಿಟ್ಟಾಗುತ್ತಿದ್ದನು. ಎಲ್ಲರನ್ನೂ ತೃಪ್ತಿಪಡಿಸಲು ಆ ಬ್ರಹ್ಮನಿಂದಲೂ ಸಾಧ್ಯವಿರಲಿಲ್ಲ.

ಸಾವಿರದ ಒಂಬೈನೂರಾ ಎಪ್ಪತ್ಮೂರು-ಎಪ್ಪತ್ತನಾಲ್ಕರಲ್ಲಿ ದೇಶ ಅನಾವೃಷ್ಟಿಯ ದವಡೆಗೆ ಸಿಕ್ಕಿತು. ಆಹಾರಧಾನ್ಯಗಳ ಕೊರತೆಯಿಂದಾಗಿ ಬೆಲೆ ಏರಿಕೆ ವಿಪರೀತವಾಯಿತು. ಜನಸಂಖ್ಯಾ ಹೆಚ್ಚಳದಿಂದಾಗಿ ನಿರುದ್ಯೋಗವೂ ತಾಂಡವವಾಡುತ್ತಿತ್ತು. ಲಂಚಕೋರ ಅಧಿಕಾರಿಗಳು-ರಾಜಕಾರಣಿಗಳು ಜನರ ಜೀವ ಹಿಂಡುತ್ತಿದ್ದರು. ಇವೆಲ್ಲವುಗಳ ಪರಿಣಾಮವಾಗಿ ಗುಜರಾತಿನಲ್ಲಿ ವಿದ್ಯಾರ್ಥಿಗಳು ದಂಗೆಯೆದ್ದರು. ಸರ್ವೋದಯ ನಾಯಕ ಜಯಪ್ರಕಾಶ ನಾರಾಯಣರು ವಿದ್ಯಾರ್ಥಿಗಳ ನಾಯಕರಾಗಿ ಸಮಗ್ರ ಕ್ರಾಂತಿಗೆ ಕರೆ ನೀಡಿದರು. ಆ ಚಳವಳಿಯ ಪರಿಣಾಮವಾಗಿ ಗುಜರಾತಿನಲ್ಲಿ ಚಿಮಣಭಾಯಿ ಪಟೇಲರ ಕಾಂಗ್ರೆಸ್ ಸರಕಾರ ಉರುಳಿಬಿತ್ತು. ಆ ಚಳವಳಿ ಕ್ರಮೇಣ ಬಿಹಾರಕ್ಕೂ ಹಬ್ಬಿತು. ಸಾವಿರದ

ಒಂಬೈನೂರಾ ಎಪ್ಪತ್ತೈದು ಜೂನ್ ಹನ್ನೆರಡರಂದು, ಚುನಾವಣೆಯಲ್ಲಿ ರಾಯಬರೇಲಿಯಿಂದ ಆರಿಸಿ ಬಂದಿದ್ದ ಇಂದಿರಾಗಾಂಧಿಯವರ ಆಯ್ಕೆಯನ್ನು ಅಲಹಾಬಾದ್ ಹೈಕೋರ್ಟ್ ಅನೂರ್ಜಿತಗೊಳಿಸಿತು. ವಿರೋಧ ಪಕ್ಷಗಳೆಲ್ಲ ಅವರು ರಾಜೀನಾಮೆ ಕೊಡಬೇಕೆಂದು ಕೇಳಿದವು.

ಇಂದಿರಾ ಅವರು ಸುಪ್ರೀಂ ಕೋರ್ಟಿಗೆ ಮೇಲ್ಮನವಿ ಸಲ್ಲಿಸಿದರು. ಅದು ಜೂನ್ ಇಪ್ಪತ್ತನಾಲ್ಕರಂದು ಪ್ರಧಾನಿಯಾಗಿ ಮುಂದುವರಿಯಲು ಒಪ್ಪಿಗೆ ನೀಡಿತು. ಅದೇ ಹೊತ್ತಿಗೆ ಜೆ.ಪಿ. ಅವರ ಚಳವಳಿ ಪರಾಕಾಷ್ಠೆಗೆ ತಲುಪಿತ್ತು. ಅವರು ಸೈನಿಕರಿಗೆ ಮತ್ತು ಪೊಲೀಸರಿಗೆ ಸರಕಾರದ ಆಜ್ಞೆಯನ್ನು ಪಾಲಿಸದಿರುವಂತೆ ಕರೆ ಕೊಟ್ಟರು. ಆಗ ಇಂದಿರಾಜಿಯವರು ಜೂನ್ ಇಪ್ಪತ್ತೈದರಂದು ಆಂತರಿಕ ತುರ್ತು ಪರಿಸ್ಥಿತಿಯನ್ನು ಘೋಷಿಸಿದರು. ವಿರೋಧಿ ನಾಯಕರೆಲ್ಲ ಬಂಧಿತರಾದರು. ಪತ್ರಿಕೆಗಳು ರಾಜಕೀಯ ಸುದ್ದಿಗಳನ್ನು ಪ್ರಕಟಿಸಲು ನಿರ್ಬಂಧವಿತ್ತು. ಮುಂದೆ ನವಂಬರ್ ಏಳರಂದು ಸುಪ್ರೀಂ ಕೋರ್ಟು ಇಂದಿರಾ ವಿಜಯವನ್ನು ಎತ್ತಿ ಹಿಡಿಯಿತು.

ಈ ತುರ್ತು ಪರಿಸ್ಥಿತಿಯ ಅವಧಿಯನ್ನು ಇತಿಹಾಸದ ಕರಾಳ ಅಧ್ಯಾಯವೆಂದು ಬಣ್ಣಿಸುವವರೂ ಇದ್ದಾರೆ. ಅದು ಇಂದಿರಾ ಅವರ ಅಪ್ರತಿಮ ಧೈರ್ಯದ ಸಂಕೇತವೆಂದು ಕರೆಯುವವರೂ ಇದ್ದಾರೆ.

ಮುಂದೆ ಸಾವಿರದ ಒಂಬೈನೂರಾ ಎಪ್ಪತ್ತೇಳು ಮಾರ್ಚ್ ಇಪ್ಪತ್ತೊಂದರಂದು ಲೋಕಸಭಾ ಚುನಾವಣೆಯಲ್ಲಿ ಇಂದಿರಾ ಅವರು ರಾಜನಾರಾಯಣರಿಂದ ಸೋಲಿಸಲ್ಪಟ್ಟರು. ಮರುದಿನ ಪ್ರಧಾನಿ ಹುದ್ದೆಗೆ ರಾಜೀನಾಮೆ ಕೊಟ್ಟರು. ಕೇಂದ್ರದಲ್ಲಿ ಜನತಾ ಸರಕಾರ ಅಧಿಕಾರಕ್ಕೆ ಬಂತು. ಮುರಾರ್ಜಿ ದೇಸಾಯಿಯವರು ಪ್ರಧಾನಿಯಾದರು. ಯಾವ ರೀತಿಯಿಂದಲೂ ಎದೆಗುಂದದ ಮಹಿಳೆಯಾದ ಇಂದಿರಾ ತಾತ್ಕಾಲಿಕವಾಗಿ ಸೋಲೊಪ್ಪಿಕೊಳ್ಳಬೇಕಾಯಿತು. ಅದೇ ವರ್ಷ ಅಕ್ಟೋಬರ್ ನಾಲ್ಕರಂದು ಅಧಿಕಾರಾವಧಿಯ ದುರುಪಯೋಗಕ್ಕಾಗಿ ಬಂಧನಕ್ಕೊಳಗಾದರು. ನಂತರ ಬಿಡುಗಡೆಯೂ ಆಯಿತು.

ಮರುವರ್ಷ ಜನವರಿಯಲ್ಲಿ ಇಂದಿರಾ ಕಾಂಗ್ರೆಸ್ ಅಧ್ಯಕ್ಷೆಯಾದರು. ಎಪ್ಪತ್ತೆಂಟರ ನವೆಂಬರ್ ಎಂಟರಂದು ಕರ್ನಾಟಕದ ಚಿಕ್ಕಮಗಳೂರಿನಿಂದ ಲೋಕಸಭೆಗೆ ಆರಿಸಿ ಬಂದರು. ಆಗಿನ ಜನತಾ ಸರ್ಕಾರದವರು ಇಂದಿರಾಗಾಂಧಿಯವರ ಮೇಲೆ ಹಕ್ಕುಚ್ಯುತಿ ನಿರ್ಣಯ ತಂದರು. ಅವರ ಲೋಕಸಭಾ ಸದಸ್ಯತ್ವವನ್ನು ವಜಾ ಮಾಡಿದರು. ಮತ್ತೆ ಅವರನ್ನು ಬಂಧಿಸಿ ತಿಹಾರ ಜೈಲಿನಲ್ಲಿಟ್ಟರು. ಒಂದು ವಾರದ ನಂತರ ಬಿಡುಗಡೆ ಮಾಡಿದರು. ಸಾಮಾನ್ಯ ಹೆಂಗಸಾಗಿದ್ದರೆ ಈ ಎಲ್ಲ ಘಟನೆಗಳಿಂದ ನೆಲಕಚ್ಚಿಬಿಡುತ್ತಿದ್ದರು. ಆದರೆ ಇಂದಿರಾ ಧೈರ್ಯ-ದಿಟ್ಟತನಕ್ಕೆ ಇನ್ನೊಂದು ಹೆಸರಾಗಿದ್ದರು. ಶಿಲ್ಪಿಯ ನೂರಾರು ಪೆಟ್ಟುಗಳಿಂದಲೇ ಮೂರ್ತಿಯೊಂದು ರೂಪುಗೊಳ್ಳುತ್ತದೆ. ಅಂತೆಯೇ ಇಂದಿರಾ ಬಾಲ್ಯದಿಂದಲೂ ಸಂಕಷ್ಟಗಳನ್ನು ಎದುರಿಸಿ- ಎದುರಿಸಿ ಪ್ರಿಯದರ್ಶಿನಿಯಾಗಿ ರೂಪುಗೊಂಡಿದ್ದರು.

ಆದೇ ಹೊತ್ತಿಗೆ ಕೇಂದ್ರದಲ್ಲಿದ್ದ ಜನತಾ ಸರ್ಕಾರದವರು ಪರಸ್ಪರ ಅಧಿಕಾರಕ್ಕಾಗಿ ಕಚ್ಚಾಡುತ್ತಿದ್ದರು. ಕೇವಲ ಎರಡೂವರೆ ವರ್ಷಕ್ಕೆ ಜನತಾ ಸರ್ಕಾರ ಬಿದ್ದು ಹೋಯಿತು. ಆಗ ಸ್ವಾಭಾವಿಕವಾಗಿ ರಾಷ್ಟ್ರಪತಿ ಆಳ್ವಿಕೆ ಬಂತು. ಸಾವಿರದ ಒಂಬೈನೂರಾ ಎಂಬತ್ತರ ಜನವರಿಯಲ್ಲಿ ಲೋಕಸಭೆಗೆ ಚುನಾವಣೆ ಘೋಷಿಸಲಾಯಿತು. ಜನವರಿ ಹದಿನಾಲ್ಕರಂದು ಇಂದಿರಾಗಾಂಧಿಯವರು ಪ್ರಚಂಡ ಬಹುಮತದಿಂದ ಆರಿಸಿಬಂದರು. ಅವರ ಕಿರಿಯ ಮಗ ಸಂಜಯಗಾಂಧಿ ಕೂಡ ಅಮೇಥಿಯಿಂದ ವಿಜಯಿಯಾದರು. ನಾಲ್ಕನೆಯ ಬಾರಿಗೆ ಇಂದಿರಾ ಅವರು ಪ್ರಧಾನಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು.

ಆದರೆ ಈ ಗೆಲುವಿನ ಹಿಂದೆಯೇ ಬಹು ದೊಡ್ಡ ಸೋಲು ಕಾದಿತ್ತು. ಅವರ ಮಗ ಸಂಜಯಗಾಂಧಿಯವರು ವಿಮಾನ ಅಪಘಾತದಲ್ಲಿ ಮರಣ ಹೊಂದಿದರು. ಈ ಘಟನೆ ಇಂದಿರಾ ಅವರಿಗೆ ಅಸಹನೀಯ ಪೆಟ್ಟಾಗಿತ್ತು. ಹಾಗೆ ನೋಡಿದರೆ ಆತ್ಮೀಯರ ಸಾವು ಅವರಿಗೆ ಹೊಸದೇನೂ ಆಗಿರಲಿಲ್ಲ. ಅಜ್ಜ-ತಾಯಿ-ಪತಿ-ತಂದೆ ಎಲ್ಲರೂ ಅವರ ಕಣ್ಣೆದುರಿಗೇ ಇಲ್ಲವಾಗಿದ್ದರು. ಆದರೆ ಸಂಜಯನನ್ನು ಆಕೆ ಹೊತ್ತು ಹೆತ್ತು ಬೆಳೆಸಿದ್ದರು.

ತನ್ನದೇ ಒಂದು ಭಾಗವೆಂಬಂತೆ ಮಗನನ್ನು ಬೆಳೆಸಿದ್ದರು. ಮಗನ ಚಿಂದಿ ದೇಹವನ್ನು ಕಣ್ಣಾರೆ ಕಾಣಬೇಕಾಗಿ ಬಂದಿದ್ದು ಅತ್ಯಂತ ದಾರುಣ ಸಂಗತಿಯಾಗಿತ್ತು. ಅದಕ್ಕಿಂತ ಹೆಚ್ಚಾಗಿ ಸಂಜಯರ ಪತ್ನಿ ಮೇನಕಾ- ಹಸುಳೆ ವರುಣರನ್ನು ಸಂತೈಸುವುದು ಇನ್ನೂ ಕಷ್ಟದ್ದಾಗಿತ್ತು. ಹಾಗೆಂದು ಪ್ರಧಾನಿಯ ಕರ್ತವ್ಯದಿಂದ ವಿಮುಖರಾಗುವಂತಿರಲಿಲ್ಲ.

ಗಾಯ ಎಂಥದೇ ಆಗಿರಲಿ, ಅದು ಕ್ರಮೇಣ ಒಣಗಿಯೇ ಒಣಗುತ್ತದೆ. ಹೊಸ ದಿನಗಳು ಹೊಸ ಘಟನೆಗಳನ್ನು ಮನಸ್ಸಿನ ಮೇಲೆ ಹೇರುತ್ತವೆ. ಇದು ಬದುಕಿನ ಸಹಜ ಧರ್ಮ. ಸಾವಿರದ ಒಂಬೈನೂರಾ ಎಂಬತ್ತೊಂದರಲ್ಲಿ ಪಂಜಾಬಿನಲ್ಲಿ ಉಗ್ರಗಾಮಿ ಚಟುವಟಿಕೆಗಳು ಪ್ರಾರಂಭವಾಗಿದ್ದವು. ಅವರು 'ಖಲಿಸ್ತಾನ' ಎಂಬ ಸ್ವತಂತ್ರ ದೇಶಕ್ಕಾಗಿ ಹೋರಾಟ ನಡೆಸಿದ್ದರು. ಆದರೆ ಅವರು ಕೇಳಿದ ಮಾತ್ರಕ್ಕೆ ದೇಶವನ್ನು ಭಾಗ ಮಾಡಿಕೊಡಲು ಸಾಧ್ಯವಿರಲಿಲ್ಲ. ಆದ್ದರಿಂದ ಇಂದಿರಾಗಾಂಧಿಯವರು ಅಕಾಲಿಗಳ ಮುಖಂಡರೊಡನೆ




**ರಾಜೀವ್, ಸೋನಿಯಾ ಸಂಜಯ್ ಜೊತೆ ಇಂದಿರಾ**

ನಾಲ್ಕಾರು ಬಾರಿ ಮಾತುಕತೆ ನಡೆಸಿದರು. ಶಾಂತಿಯುತ ಸಹಬಾಳ್ವೆಗಾಗಿ ವಿನಂತಿಸಿದರು. ಆದರೆ ಅವರು ಒಪ್ಪಲಿಲ್ಲ. ಕಂಡಕಂಡಲ್ಲಿ ರಕ್ತದ ಹೊಳೆ ಹರಿಸುವುದನ್ನು ನಿಲ್ಲಿಸಲಿಲ್ಲ. ಬೀದಿ ಬೀದಿಗಳಲ್ಲಿ ಗುಂಡು ಹಾರಿಸುತ್ತ ಸಿಕ್ಕವರನ್ನೆಲ್ಲ ಕೊಲ್ಲತೊಡಗಿದರು. ಅಮೃತಸರದ ಸ್ವರ್ಣ ದೇವಾಲಯದಲ್ಲಿ ಅಡಗಿಕೊಂಡ ಉಗ್ರಗಾಮಿಗಳು ದೇಶಾದ್ಯಂತ ಕೊಲೆ-ಸುಲಿಗೆ ನಡೆಸಿದರು. ಅವರ ಅಮಾನುಷ ಕೃತ್ಯಗಳಿಗೆ ಕಡಿವಾಣ ಹಾಕಲೇಬೇಕಾಗಿತ್ತು.

ಸಾವಿರದ ಒಂಬೈನೂರಾ ಎಂಬತ್ನಾಲ್ಕು ಜೂನ್ ಐದರಂದು ಉಗ್ರಗಾಮಿಗಳ ವಿರುದ್ಧ ಸ್ವರ್ಣ ದೇವಾಲಯದ ಮೇಲೆ ಸೈನಿಕ ಕಾರ್ಯಾಚರಣೆಗೆ ಇಂದಿರಾಗಾಂಧಿಯವರು ಆಜ್ಞೆಯಿತ್ತರು. ಬಹಳ ಜನ ಸತ್ತರು. ಉಳಿದವರು ಅಪಾರ ಶಸ್ತ್ರಾಸ್ತ್ರಗಳೊಂದಿಗೆ ಶರಣಾದರು. ಕೂಡಲೆ ದೇವಾಲಯಕ್ಕೆ ಉಂಟಾದ ಹಾನಿಯನ್ನು ಸರಕಾರ ಸರಿಪಡಿಸಿಕೊಟ್ಟಿತು. ಆದರೂ ಸಿಖ್ಖರ ಕೋಪ ಆರಲಿಲ್ಲ. ಈ ವಿಷಯದ ಅರಿವಿದ್ದ ಅಧಿಕಾರಿಗಳು ಪ್ರಧಾನಿ ನಿವಾಸದಲ್ಲಿದ್ದ ಎಲ್ಲ ಸಿಖ್ಖರನ್ನು ಬೇರೆಡೆಗೆ ಕಳಿಸಲು ಸಲಹೆ ಮಾಡಿದರು. ಆದರೆ ಇಂದಿರಾರವರು ಇದಕ್ಕೆ ಒಪ್ಪಲಿಲ್ಲ. "ಹಾಗೆ ಮಾಡಿದರೆ ನಮ್ಮ ಜಾತ್ಯಾತೀತ ತತ್ವವನ್ನೇ ಬಲಿಕೊಟ್ಟಂತೆ" ಎಂದು ಆ ಸಲಹೆಯನ್ನು ನಿರಾಕರಿಸಿದರು.

ಸಾವಿರದ ಒಂಬೈನೂರಾ ಎಂಬತ್ನಾಲ್ಕು ಅಕ್ಟೋಬರ್ ಮೂವತ್ತರಂದು ಇಂದಿರಾಗಾಂಧಿಯವರು ಒರಿಸ್ಸಾ ರಾಜ್ಯದ ಪ್ರವಾಸ ಮುಗಿಸಿಕೊಂಡು ದಿಲ್ಲಿಗೆ ಹಿಂದಿರುಗಿದ್ದರು. ಮರುದಿನ ಅಂದರೆ ಮೂವತ್ತೊಂದರಂದು ಮುಂಜಾನೆ ಒಂಭತ್ತು ಗಂಟೆ ಹದಿನಾರು ನಿಮಿಷಕ್ಕೆ ಮನೆಯಿಂದ ಕಛೇರಿಗೆ ಹುಲ್ಲು ಹಾಸಿನ ಮೇಲೆ ನಡೆದುಹೋಗುತ್ತಿದ್ದರು. ಆಗ ಅವರ ನಿವಾಸದ ಕಾವಲುಗಾರರಾಗಿದ್ದ ಇಬ್ಬರು ಎದುರು ಬಂದರು. ಒಬ್ಬನು ಮೊದಲು ಇಂದಿರಾಗಾಂಧಿಯವರಿಗೆ ನಮಸ್ಕಾರ ಮಾಡಿದನು. ಮರುಕ್ಷಣದಲ್ಲಿ ಅತಿ ಸಮೀಪದಿಂದ ಗುಂಡು ಹಾರಿಸಿದನು. ಆಗ ಇಂದಿರಾ ಕುಸಿದು ಬಿದ್ದರು. ಮತ್ತೆ ಇನ್ನೊಬ್ಬನು ಇಪ್ಪತ್ತು ಸುತ್ತು ಗುಂಡು ಹಾರಿಸಿದನು. ಇದೆಲ್ಲವೂ ಕೇವಲ ಆರು ಸೆಕೆಂಡುಗಳಲ್ಲಿ ನಡೆದುಹೋದವು.



ದೇಶದ ಜನತೆಗೆ ನಮಸ್ಕಾರ

ಆದರೆ ಇಂದಿರಾ ಮನೆಯವರಿಗೆ ತಕ್ಷಣ ಈ ಸುದ್ದಿ ಗೊತ್ತಾಗಲಿಲ್ಲ. ಒಂದು ಕ್ಷಣ ಬಿಟ್ಟು ಸೋನಿಯಾ ಓಡಿ ಬಂದಳು. ಅತ್ತೆ ಇಂದಿರಾರವರು ಪ್ರಜ್ಞಾಹೀನರಾಗಿ



ರಕ್ತದ ಮಡುವಿನಲ್ಲಿ ಬಿದ್ದಿದ್ದರು. ಕೂಡಲೇ ಅವರನ್ನು ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ ಒಯ್ಯಲಾಯಿತು. ಅಲ್ಲಿ ಡಾಕ್ಟರುಗಳು ಇಂದಿರಾರ ಪ್ರಾಣ ಉಳಿಸಲು ಎರಡೂವರೆ ಘಂಟೆಗಳ ಕಾಲ ಹೆಣಗಾಡಿದರು. ಆದರೆ ಪ್ರಯೋಜನವಾಗಲಿಲ್ಲ. ಮಧ್ಯಾಹ್ನದ ಹೊತ್ತಿಗೆ ಇಂದಿರಾ ಪ್ರಿಯದರ್ಶಿನಿ ಕೊನೆಯುಸಿರೆಳೆದರು. ಇಡೀ ಜಗತ್ತೇ ಇಂದಿರಾಗಾಂಧಿಯವರ ಸಾವಿನಿಂದ ಶೋಕತಪ್ತವಾಯಿತು. ಅವರ ಟೀಕಾಕಾರರೂ ಕೂಡ ಈ ಬಲಿದಾನಕ್ಕಾಗಿ ಮಮ್ಮಲ ಮರುಗಿದರು.

ನಮ್ಮ ದೇಶದಲ್ಲಿ ಹೆಂಗಸಿನ ಸ್ಥಾನ ಹೊಸ್ತಿಲೊಳಗೆ ಎಂಬ ನಂಬಿಕೆಯಿದೆ. 'ತೊಟ್ಟಿಲು ತೂಗಿದ ಕೈ ಜಗತ್ತನ್ನೇ ಆಳಬಹುದು' ಎಂಬ ಹೇಳಿಕೆಯೂ ಇದೆ. ಆದರೆ ತೊಟ್ಟಿಲು ಮಾತ್ರವಲ್ಲ, ಇಡೀ ದೇಶವನ್ನೇ ತೂಗಿದ ಮಾತೃಹೃದಯವೊಂದು ಹೃದಯಹೀನರ ಗುಂಡಿಗೆ ಬಲಿಯಾಯಿತು. ಇದೊಂದು ಕ್ರೂರ ವಿಡಂಬ



***

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು